ಉಪನ್ಯಾಸಗ್ರಂಥಮಾಲೆ

೧೪




# ವಿಚಾರವಾದ

ಗೌರೀಶ ಕಾಯ್ಕಿಣಿ





ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ನವಂಬರ, ೧೯೫೮

ಉಪನ್ಯಾಸಗ್ರಂಥಮಾಲೆ
೧೪

# ವಿಚಾರವಾದ

ಗೌರೀಶ ಕಾಯ್ಕಿಣಿ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ನವಂಬರ, ೧೯೫೮

ಪ್ರಕಾಶಕರು :
ರಜಿಸ್ಟ್ರಾರ್
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಮೊದಲನೆಯ ಮುದ್ರಣ
೨,೦೦೦ ಪ್ರತಿಗಳು



ಬೆಲೆ : ೨೫ ನಯೆಪೈಸೆ

ಮುದ್ರಕರು :
ಆರ್. ಟಿ. ಬಿಳಗಿ
ಲಿಂಗರಾಜ ಆರ್ಟ ಪ್ರೆಸ್, ಧಾರವಾಡ

# ಮಾಲೆಯ ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯು ಸಿದ್ಧಪಡಿಸಿದ ಯೋಜನೆಯ ಮೇರೆಗೆ ಮೊದಲನೆಯ ಉಪನ್ಯಾಸಮಾಲೆ ೧೯೫೨ ನೆಯ ನವಂಬರ ತಿಂಗಳಲ್ಲಿ ಗದಗಿನಲ್ಲಿ ನೆರವೇರಿತು. ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯಕ್ಕೆ ತಿಳಿಯುವ ಶೈಲಿಯಲ್ಲಿ ಉಪನ್ಯಾಸಗಳನ್ನು ಕನ್ನಡದಲ್ಲಿ ಕೊಟ್ಟರು. ವಿಶ್ವವಿದ್ಯಾಲಯದ ಜ್ಞಾನ ಭಂಡಾರವನ್ನು ಕಾಲೇಜು ತರಗತಿಗಳಿಗೆ ಮೀಸಲಾಗಿ ಇಡದೆ ಅದರ ಅಲ್ಪಾಂಶವನ್ನಾದರೂ ಮಹಾಜನರ ಮನೆಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ ಪ್ರೋತ್ಸಾಹವೂ ದೊರೆತುವು. ಅಂದು ಗದಗಿನಲ್ಲಿ ಪ್ರಾರಂಭಿಸಿದ ಉಪನ್ಯಾಸಮಾಲೆ ಈಚೆಗೆ ಉತ್ತರ ಕರ್ನಾಟಕದ ಹಲವು ಊರುಗಳಲ್ಲಿ ನಡೆದಿದೆ, ಮುಂದೆಯೂ ನಡೆಯಲಿದೆ. ಇದು ನಮ್ಮ ವಿಶ್ವವಿದ್ಯಾಲಯದ ಪ್ರತಿ ತಿಂಗಳ ಕಾರ್ಯಕ್ರಮವಾಗಿ ಪರಿಣಮಿಸಿದೆ.

ಇಂಥ ಉಪನ್ಯಾಸಗಳನ್ನು ವಿದ್ವಾಂಸರ ಮುಖದಿಂದ ಪ್ರತ್ಯಕ್ಷವಾಗಿ ಕೇಳುವ ಜನರಿಗೆ ಆಸಕ್ತಿಯೂ ತಿಳಿವಳಿಕೆಯೂ ಹೆಚ್ಚುವುದು ಸಹಜ. ಆದರೆ ಉಪನ್ಯಾಸದ ಮಾತು ಕೇಳಿದ ಕಿವಿಯಲ್ಲೇ ಕರಗಿ ಹೋಗುತ್ತದೆ; ಕೆಲವು ಕಾಲ ಕಳೆದ ಬಳಿಕ ಉಪನ್ಯಾಸದ ವಿವರಗಳನ್ನು ನೆನಪಿಗೆ ತಂದುಕೊಳ್ಳುವುದು ಸಭೆಯಲ್ಲಿದ್ದವರಿಗೇ ಅಶಕ್ಯವಾಗುತ್ತದೆ. ಬೇರೆ ಊರಿನವ ರಂತೂ ಇವುಗಳ ಲಾಭವನ್ನು ಪಡೆಯುವ ಹಾಗೆಯೇ ಇಲ್ಲ. ಆದಕಾರಣ ಉಪನ್ಯಾಸಗಳನ್ನು ಕೊಡಿಸಿದಷ್ಟಕ್ಕೇ ತೃಪ್ತಿ ಗೊಳ್ಳದೆ, ಇವುಗಳಲ್ಲಿ ಕೆಲವನ್ನಾದರೂ ಗ್ರಂಥರೂಪದಲ್ಲಿ ಬರೆ ಯಿಸಿ, ಸುಲಭವಾದ ಬೆಲೆಗೆ ಪ್ರಕಟಿಸಿ, ಕನ್ನಡ ಜನದಲ್ಲೆಲ್ಲ ಹರಡಬೇಕೆಂಬ ಸೂಚನೆ ಸಹಜವಾಗಿಯೇ ಬಂದಿತು. ಇದನ್ನು ವಿಶ್ವವಿದ್ಯಾಲಯದ ಪ್ರಕಟನ ಸಮಿತಿ ಉತ್ಸಾಹದಿಂದ ಅಂಗೀ ಕರಿಸಿತು. ಈ ಬಗೆಯ ಪ್ರಯತ್ನ ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಹಿಂದೆಯೇ ನಡೆದು ಇಂಥದೊಂದು ಗ್ರಂಥಮಾಲೆ ಅಲ್ಲಿ ಜನಪ್ರಿಯವಾಗಿ ಪರಿಣಮಿಸಿದ ಸಂಗತಿ ನಮ್ಮ ಸಂಕಲ್ಪಕ್ಕೆ ಮತ್ತಷ್ಟು ಹುರುಪನ್ನು ಕೊಟ್ಟಿತು. ಹೀಗೆ ವಿಶ್ವವಿದ್ಯಾಲಯದ ಜನತಾಶಿಕ್ಷಣ ಕಾರ್ಯವು ಈ 'ಉಪನ್ಯಾಸ ಗ್ರಂಥಮಾಲೆ'ಯ ಮೂಲಕ ಇನ್ನೊಂದು ಹೆಜ್ಜೆಯನ್ನು ಮುಂದಕ್ಕೆ ಇರಿಸಿದೆ.

ನಮ್ಮ ಪ್ರಾರ್ಥನೆಗೆ ಮನ್ನಣೆ ಕೊಟ್ಟು, ಪ್ರತಿಫಲದ ಅಪೇಕ್ಷೆ ಇಲ್ಲದೆಯೆ, ಉಪನ್ಯಾಸಕರು ಪುಸ್ತಕಗಳನ್ನು ಬರೆದು ಕೊಡುತ್ತಿರುವುದು ಶ್ಲಾಘ್ಯವಾದ ವಿಷಯ; ಇದಕ್ಕಾಗಿ ಈ

ಲೇಖಕ ಮಹಾಶಯರಿಗೆ ವಿಶ್ವವಿದ್ಯಾಲಯದ ವಂದನೆಗಳನ್ನು ಸಂತೋಷದಿಂದ ಸಲ್ಲಿಸುತ್ತೇನೆ. ಈ ' ಉಪನ್ಯಾಸ ಗ್ರಂಥ ಮಾಲೆ ' ಕನ್ನಡಿಗರ ಪ್ರೀತಿಗೆ ಪಾತ್ರವಾಗಲೆಂದು ಇದರ ಪ್ರಕಾಶನದಿಂದ ನಮ್ಮ ಜನತೆಯ ಜ್ಞಾನಾಸಕ್ತಿ ಪುಷ್ಟಿಗೊಳ್ಳ ಲೆಂದು ಹಾರೈಸುತ್ತೇನೆ.

ಧಾರವಾಡ
೧-೧-೧೯೫೫

ಡಿ. ಸಿ. ಪಾವಟೆ
ಉಪಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

# ಅರಿಕೆ

ನಾನು ತಿಳಿದಮಟ್ಟಿಗೆ ಹೊಸಗನ್ನಡ ಪ್ರಜ್ಞಾಪ್ರಪಂಚಕ್ಕೆ ಈ ವಿಷಯದ ಈ ಬಗೆಯ ವಿನ್ಯಾಸ ಹೊಸತೇನೊ. ಅದಕ್ಕಾಗಿಯೆ ನನ್ನ ಕವಿಮಿತ್ರ ಶ್ರೀ ಕಣವಿಯವರು ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಉಪನ್ಯಾಸಮಾಲೆಯಲ್ಲಿ ಈ ಕುರಿತು ಒಂದು ಹೂವನ್ನೊ ಹರಳನ್ನೊ ಪೋಣಿಸಲು ಕೇಳಿದಾಗ ನಾನು ಧನ್ಯತೆಯಿಂದ ಒಪ್ಪಿಕೊಂಡೆ – ಆದರೆ ಧೈರ್ಯದಿಂದ ಮಾತ್ರವಲ್ಲ. ಆದರೂ ನನಗೆ ಒಂದು ರೀತಿ ಹುರುಪು. ಹೇಗೂ ಇಂಥ ವಿಚಾರವಾಗಿ ಹೀಗೆ ಮಾತನಾಡುತ್ತಿದ್ದುದ್ದು ನಾನೇ ಮೊದಲು. ಆದ್ದರಿಂದ ಪೂರ್ವಿಕರೊಂದಿಗೆ ತುಲನೆಯ ಭಯವಿಲ್ಲ-ಎಂದು. ಆದರೆ ಮುಂದೆ ಇದನ್ನ ಬರೆದುಕೊಡಲು ಅವರು ತಮ್ಮ ಇನಿದನಿಯಲ್ಲಿ ಅಪ್ಪಣೆ ಮಾಡಿದರು. ಆಗ ನಿಜವಾಗಿಯೂ ಧನ್ಯತೆ ಕರಗಿ ಹೋಗಿ ದೈನ್ಯಭಾವವೇ ಉಳಿಯಿತು! ಉಸಿರಾಗಿ ಆಡಿ ಹೋದ ಮಾತು ಮಸಿಯಲ್ಲಿ ಮೂಡಿಸುವ ಸಾಹಸ-ಅದೂ ಇಂಥ ಒಂದು ಆವ್ಹಾನಾತ್ಮಕವೂ ಪ್ರಚೋದಕವೂ ಆದ ಪ್ರಸ್ತಾಪದಲ್ಲಿ! ಆದರೂ ಇದೂ ಒಂದು ಸಂಧಿಯೆಂದು ಹೆರವರು ಹಿಂಜರಿಯಬಹುದಾದಲ್ಲಿ ನಾನು ದುಡುಕಿದ್ದೇನೆ. ಇದರಲ್ಲಿ ಅರ್ಥವೆಷ್ಟು ವ್ಯರ್ಥವೆಷ್ಟು – ಓದುಗರೇ ವಿಮರ್ಶಿಸಬೇಕು.

ಯಾವ ಪಾರಿಭಾಷಿಕ ತೊಡಕು ಇಲ್ಲದೇ ತಕ್ಕಮಟ್ಟದ ಓದಿ ಕಲಿತ ಕನ್ನಡ ಜಾಣರಿಗೆಲ್ಲ ಬೋಧವಾಗುವಂತೆ ನಾನು ಈ ವಿಷಯ ನಿರೂಪಿಸಿದ್ದೇನೆ. ವಾಚಕರಲ್ಲಿ ಯಾವ ಪೂರ್ವ ಸಿದ್ಧತೆಯನ್ನೂ ಗ್ರಹಿತವಿಟ್ಟುಕೊಂಡಿಲ್ಲ. ಆದರೂ ಈ ಯತ್ನ ಯಾತನೆಯೆನಿಸಿದರೆ ಅದು ಕೇವಲ ನನ್ನ ಪರಿಮಿತಿಯ ದೋಷ.

ಜಗತ್ತಿನಲ್ಲಿ ಜೀವದ ವಿಕಾಸ ಇಂದು ಮನೋಮಯ ದಿಂದ ವಿಜ್ಞಾನಮಯ ಕೋಶಕ್ಕೆ ಏರುತ್ತಿದೆ. ವ್ಯಕ್ತಿಶಃ ಕವಿ, ಕಲಾವಿದ, ಅನುಭಾವಿ ಆಧ್ಯಾತ್ಮಿಗಳಲ್ಲಿ ಅದು ಆನಂದಮಯ ವನ್ನು ಮುಟ್ಟಿರಬಹುದು. ಆದರೆ ಮಾನವನ ಮೋಕ್ಷ ಸಾಮೂಹಿಕವಾಗಿಯೇ ಆಗಬೇಕು. ಅಂದರೇನೇ ಉತ್ಕ್ರಾಂತಿ ಯೆಂಬ ಮಹಾಯಾತ್ರೆಯಲ್ಲಿ ಮನುಷ್ಯಕುಲಕ್ಕೆ ನಿಜವಾದ ನಿಃಶ್ರೇಯಸ. ಈ ನಿಟ್ಟಿನಲ್ಲಿ ಸಾಗಲು ವಿಚಾರವಾದ ಒಂದೇ ಕೈದೀಪ, ಆನುಗೋಲು, ದಾರಿಯ ಬುತ್ತಿ. ಆನಂದದ ರಸಾನುಭೂತಿಗೆ ತಾಟಸ್ಥ್ಯ ಅವಶ್ಯ ಸಂಕೇತ. ಆ ತಾಟಸ್ಥ್ಯ ಕೇವಲ ಬೌದ್ಧಿಕ ಪರಿಪಾಕದಿಂದಲೇ ಸಾಧ್ಯ. ಅದಕ್ಕೆ ವಿಚಾರವಾದದ ಬುದ್ಧಿಪೂರ್ವಕ ವ್ಯವಸಾಯವೇ ಸಾಧನ. ಈ ಸಾಧನೆಯಲ್ಲಿ ನಮ್ಮ ಕನ್ನಡ ಜನ – ಅದೂ ಕಲಿತು ಬಲ್ಲವರಾದ ಕಲಿಯಬಲ್ಲವರಾದ ಜನ – ಮಿಕ್ಕ ಪ್ರಾಂತಗಳ ಮಾನದಲ್ಲಿ ತುಸು ಹಿಂದೆಯೇ ಬಿದ್ದಂತಿದೆ. ಇದಕ್ಕೆ ಯೋಗ್ಯಾಯೋಗ್ಯ ಕಾರಣಗಳು ಹಿಂದೆ ಏನೇ ಇದ್ದಿರಲಿ, ಇನ್ನು ಮುಂದೆ ನಮ್ಮಲ್ಲಿ ಸಾಂಸ್ಕೃತಿಕ ಅಭಿವೃದ್ಧಿಗೆ

ಮುಂದಾಗಿ ಆಗತಕ್ಕ ವಿಚಾರಕ್ರಾಂತಿಗೆ ಈ ವಿಚಾರವಾದ ಸಂಕಲ್ಪವಲ್ಲದೆ " ನಾನ್ಯಃ ಪಂಥಾಃ ವಿದ್ಯತೇ ಅಯನಾಯ " ಇದೊಂದೆ ನಂಬಿಗೆ ನನ್ನೀ ದುಡುಕಿಗೂ ದುಡಿಮೆಗ ಪ್ರೇರಣೆ.

ಕರ್ನಾಟಕ ವಿಶ್ವವಿದ್ಯಾಲಯವು ಆರಂಭಿಸಿದ ಈ " ವ್ಯಾಸಂಗ ವಿಸ್ತರಣೋಪನ್ಯಾಸಮಾಲೆ " ಒಂದು ಸಾರ್ಥ ವಾದ ಉಪಕ್ರಮ. ಜನತೆಯ ಜ್ಞಾನಪಿಪಾಸೆ ಆರಲಿಕ್ಕೆ ಹಾ ಕೊಟ್ಟ ಈ ಅರವಟ್ಟಿಗೆ ವಿದ್ಯಾಲಯವನ್ನು ವಿಶ್ವತೋಮು ವಾಗಿ ಮಾಡುವ ಒಂದೇ ಹಾದಿ. ಆ ಹಾದಿಯಲ್ಲಿ ಕೆಲವ ಹೆಜ್ಜೆಗಳನ್ನು ನಡೆಯಲಿಕ್ಕೆ ನನಗೂ ಒಂದು ಅವಕಾ ಒದಗಿಸಿ ಕೊಟ್ಟದ್ದಕ್ಕಾಗಿ ವಿಶ್ವವಿದ್ಯಾಲಯಕ್ಕೂ, ವ್ಯಾಸಂ ವಿಸ್ತರಣೋಪನ್ಯಾಸ ವಿಭಾಗದ ಸಂಚಾಲಕರಿಗೂ ನಾನ ತುಂಬ ಕೃತಜ್ಞ.

೧, ಸಪ್ಟಂಬರ್ ೧೯೫೮

ಗೋಕರ್ಣ

ಗೌರೀಶ ಕಾಯ್ಕಿ

# ವಿಚಾರವಾದ

## ೧. ಬುದ್ಧಿವಂತನೋ ? ಬುದ್ಧಿವಾದಿಯೋ ?

ನಾನು ಇಲ್ಲಿ ಪ್ರಸ್ಥಾಪಿಸುತ್ತಿರುವದು " ಬುದ್ಧಿವಾದ ". ಇಲ್ಲವೆ " ವಿಚಾರವಾದ "ದ ಕುರಿತು ಒಂದು ಕಳಕಳಿಯ ಪ್ರತಿಪಾದನೆ. ಬುದ್ಧಿವಾದದ ಕುರಿತು ಪ್ರತ್ಯೇಕ ಪ್ರತಿಪಾದನೆ ಬೇಕೇ ? ಮನುಷ್ಯನೆಂದಮೇಲೆ ಬುದ್ಧಿ ಇಲ್ಲದೆ ನಡೆಯ ಬಲ್ಲನೇ ? ಅದಕ್ಕಾಗಿ ವಾದವೆಲ್ಲಿ ಬಂತು ? ಎಂದೆಲ್ಲ ಅನೇಕ ಬುದ್ಧಿವಂತರು ಪುಂಖಾನುಪುಂಖವಾಗಿ ಪ್ರಶ್ನೆಗಳ ಶರಸಂಧಾನ ವನ್ನು ಮಾಡಬಹುದು, ನಮ್ಮ ಬಾಯಿ ಮುಚ್ಚಲಿಕ್ಕೆ ! ಮತ್ತು ಇಂಥ ಪ್ರಶ್ನೆಗಳಲ್ಲಿ ಏನೂ ಹುರುಳು ಇಲ್ಲವೆಂತಲೂ ಅಲ್ಲ. ತತ್ವತಃ ಮನುಷ್ಯ ಬುದ್ಧಿಯುಳ್ಳ ಪ್ರಾಣಿ. ಆತನ ಬದುಕೆಲ್ಲ ಬುದ್ಧಿಯಿಂದ ತಿದ್ದಿ ತಿಳಿಯಾಗತಕ್ಕದ್ದು.

ಬಾಳನ್ನು ತಿಳಿಗೊಳಿಸುವ ಆ ಶಕ್ತಿಯೇ "ತಿಳಿವಳಿಕೆ" "ಜೀವನದ ಸಲುವಳಿಕೆ". ಪಶುಗಳಿಂದ ಬೇರ್ಪಡಿಸುವ ಮಾನವನೆಂಬ ರೆಕ್ಕೆ ಪುಚ್ಛವಿಲ್ಲದ ದ್ವಿಪಾದ ಪ್ರಾಣಿಯ ಹೆಗ್ಗಳಿಕೆ, ಸೃಷ್ಟಿಯ ಸರ್ವಶ್ರೇಷ್ಠ ಜೀವವಿಕಾಸವೆಂಬ ಆತನ ಅಗ್ಗಳಿಕೆ! ಎಂಥ ದಡ್ಡ ಮನುಷ್ಯನೂ ತನ್ನ ದಿ ನಿತ್ಯದ ಬಾಳನ್ನು ತನ್ನ ನಿಲುಕಿನ ಮಟ್ಟಿಗೆ ತನ್ನ ಬುದ್ಧಿಯ ತೆಕ್ಕೆಯಲ್ಲಿಯೇ ತಾನು ತಿಳಿದಮಟ್ಟಿಗೆ ತನ್ನ ತಿಳಿವಿನ ಮಟ್ ದಲ್ಲಿಯೇ ಬದುಕುತ್ತಾನೆ, ಬದುಕಲು ಹೆಣಗುತ್ತಿರುತ್ತಾನೆ "ನಾನೇನು ಹುಚ್ಚನೋ?" "ನಾನು ಅಷ್ಟು ಮೂರ್ಖನೋ ಎಂದೆಲ್ಲ ಸೊಂದ ಬಿಂಕದಿಂದ ಕೇಳುವ ಎಷ್ಟು ಮೂಢರನ್ನು ನಾವು ಕಂಡಿಲ್ಲ? ಅಂದರೆ ಸಾಮಾನ್ಯವಾಗಿ ಮಂದಿ ಬುದ್ಧಿ ತೋಚಿದಂತೆಯೇ ಅಥವಾ ಬುದ್ಧಿಗೆ ತೋಚಿದೆಯೆಂದ ತಿಳಿದುಕೊಂಡಂತೆಯೇ ನಡೆಯುತ್ತಾರೆಂಬುದು ನಿಜ.

ಆದರೆ ಆ ಮಾತ್ರಕ್ಕೆ ಮಂದಿಯೆಲ್ಲ ಬುದ್ಧಿಪೂರ್ವಕ ವಾಗಿ ಬಾಳುವರೆಂದು ಹೇಳಲು ಬರುವಂತಿಲ್ಲ. ಇಲ್ಲಿ ನಾವು ನೆನಪಿಡತಕ್ಕ ಸಂಗತಿಯೆಂದರೆ ಬುದ್ಧಿಯುಳ್ಳವರೆಲ್ಲರೂ ಬುದ್ಧಿವಂತರಲ್ಲ; ಬುದ್ಧಿವಂತರೆಲ್ಲರೂ ಬುದ್ಧಿವಾದಿಗಳಲ್ಲ. ಇದನ್ನು ಅರಿತುಕೊಳ್ಳಲು ನಾವು ಆಳದ ನೀರಿಗೆ ಇಳಿಯ ಬೇಕೆಂತಲೂ ಇಲ್ಲ. ಹಗಲೆಲ್ಲ ನಾವು ಬದುಕಿದ ರೀತಿ ಯನ್ನು ರಾತ್ರಿ ಮಲಗುವ ಮುನ್ನ ಹಸೆಯಲ್ಲಿ ಕೂತು ನಿಧಾನವಾಗಿ ನೆನಪಿಗೆ ತಂದುಕೊಂಡರೆ ನಮಗೆ ಅನಿಸುವ ದೇನು? "ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟ" ಅಥವಾ

“ಕಾಲಿಗೆ ಬುದ್ಧಿ ಹೇಳಿದ” ಕೆಲವು ವಿಪರೀತದ ಪ್ರಸಂಗಗಳನ್ನು ಬಿಟ್ಟರೂ, ಉಳಿದ ನೂರಾರು ಸಂದರ್ಭಗಳಲ್ಲಿ ನಾವು ಬುದ್ಧಿಗೆ ಒಪ್ಪುವಂತೆ ಇಲ್ಲವೆ ಬುದ್ಧಿಯು ಒಪ್ಪುವಂತೆ ನಡೆದದ್ದು ಇರುವದಿಲ್ಲ! “ಹೀಗೆ ಮಾಡಬೇಕಿತ್ತು”, “ಹಾಗೆ ಆಡಬಾರದಾಗಿತ್ತು” “ಅದೊಂದು ಅಚಾತುರ್ಯ ಘಟಿಸಿ ಹೋಯಿತು” “ಅಯ್ಯೋ ನಂಬಿ ಕೆಟ್ಟೆ!” “ಅಷ್ಟು ಹೊತ್ತಿಗೆ ನನಗೆ ಏನು ಮಂಕು ಬಡಿಯಿತೋ ದೇವರೇ ಬಲ್ಲ!” “ಥೂ ಇಂದಿನ ದಿನ ಸಂಸಾರ ಮಾಡಲು ಎಷ್ಟು ಬುದ್ಧಿ ಇದ್ದರೂ ಸಾಲದು!” ಹೀಗೆಲ್ಲ ನಾವು ಹಗಲೆಲ್ಲ ಹೂಡಿದ ಹೂಟಗಳನ್ನೂ, ನಡೆ-ನುಡಿ-ಒಡನಾಟಗಳಲ್ಲಿ ಮಾಡಿದ ಅಥವಾ ಮಾಡಲು ತಪ್ಪಿದ ಸಂಗತಿಗಳನ್ನೂ ಹಂಬಲಿಸಿ ಹಳಹಳಿಸುತ್ತೇವೆ. ಉಪಾಯಗಾಣದೆ ಪೆಚ್ಚು ಬೀಳುವದು, ಉಪಾಯವೆಂದು ಒಡ್ಡಿದ್ದು ಅಪಾಯವಾಗಿ ಪೇಚು ಉಂಟಾಗುವದು, ತಪ್ಪು ತಿಳಿಯುವದು, ತಿಳಿದು ತಪ್ಪುವದು,- ಒಂದೇ ? ಎರಡೇ ? ಎಷ್ಟು ಸಲ ಎಷ್ಟು ಬಗೆ ನಾವು ಹುಂಬರಂತೆ ಪಶುಗಳಂತೆ ನಡೆಯುವದಿಲ್ಲ! ಎಷ್ಟೋ ಸಲ ನಮ್ಮ ಮನೋವಿಕಾರಗಳು ನಮ್ಮ ಬಾಯಿಯಿಂದ ನಮಗಾಗಿ ಮಾತನಾಡುತ್ತವೆ. ನಾವು, “ಇದೆಂಥ ಮಾತು ನಾನು ಆಡಿದೆ!” ಎಂದು ಕೈಕಟ್ಟಿಕೊಂಡು ಅಸಹಾಯರಾಗಿ ಆಶ್ಚರ್ಯದಿಂದಲೋ ನಾಚಿಕೆಯಿಂದಲೋ ತೆಪ್ಪಗೆ ನಿಂತು ಬಿಡುತ್ತೇವೆ! ಆಗ ನಮ್ಮ ಬುದ್ಧಿ, ಬುದ್ಧಿವಂತಿಕೆ ಎಲ್ಲಿ ಹೋಗುತ್ತವೆ ? ಅಂದರೆ ನಮ್ಮ ಬುದ್ಧಿ ಪೂರ್ತಿ ನಮ್ಮದಲ್ಲವೆ? ನಮ್ಮ ಬುದ್ಧಿಗೂ ಮೀರಿದ ಒಂದು ಸೆಳೆತ ಒಂದು ರಭಸ

ನಮ್ಮಲ್ಲಿ ಒತ್ತಿ ಬಂದು ನುಗ್ಗಿ ನೆಗೆದು ಕೆಲಸ ಮಾ ತ್ತದೆಯೇ ? ಹಾಗಿದ್ದರೆ ನಾವು ಮನುಷ್ಯಪ್ರಾಣಿಗಳು ಸದ ಕಾಲವೂ ಬುದ್ಧಿವಂತರಲ್ಲವೆ? ಬುದ್ಧಿಯಿದ್ದ ಪ್ರಾಣಿಗಳಲ್ಲವೆ

## ೨. ಬುದ್ಧಿವಾದದ ಅಗತ್ಯ

ಈ ಮಾತಿನ ಸೂಕ್ಷ್ಮ ಈ ಪ್ರಶ್ನೆಯಲ್ಲಿಯೇ ಅಡ ವಾಗಿದೆ. ಮನುಷ್ಯ ಬುದ್ಧಿಯುಳ್ಳ ಪ್ರಾಣಿ. ಅಂದ ಮೂಲತಃ ಪ್ರಾಣಿ, ಪಶು. ಅನಂತರ ಕ್ರಮೇಣ ಬುದ್ಧಿಯನ್ ಬೆಳೆಸಿಕೊಂಡಾತ. ಆ ಬುದ್ಧಿಯೂ ಗೇರಿನ ಬೀಜದಂ ಅಥವಾ ಹಲಸಿನ ಬೇಳೆಯಂತೆ, ಹೊರಗಿಂದ ಇಲ್ಲವೆ ಒ ಗಿಂದ ಫಕ್ಕನೆ ಬಲಿತು ಅಂಟಿಕೊಂಡು ಬಂದ ಆಗಂತು ವಸ್ತುವಲ್ಲ. ಹಾಲಿನ ಕೆನೆಯಂತೆ ಕಾಳಿನ ತೆನೆಯಂ ವಿಕಾಸಕ್ರಮದಲ್ಲಿ ನವಿರಾಗಿ ನಿಧಾನವಾಗಿ ವಿಪಾಕಗೊಂಡ ಒಡಮೂಡಿದ ಒಂದು ಶಕ್ತಿ, ಧರ್ಮ, ಮತ್ತು ಲಕ್ಷಣ. ಅಂದ ಮೇಲೆ ಮನುಷ್ಯನೆಂದಾಕ್ಷಣ ಎಲ್ಲರಿಗೂ ಒಂದೇ ಮಾದರಿಯ ಇಲ್ಲವೆ ಒಂದೇ ಮೊತ್ತದ ಬುದ್ಧಿ ಇರುವದೆಂದಲ್ಲ. ಇದ್ದಷ್ಟು ಬುದ್ಧಿಯ ಬಳಕೆ ಎಲ್ಲರೂ ಒಂದೇ ಬಗೆಯಾಗಿ ಮಾಡಿಕೊಳ್ಳ ಬಲ್ಲರೆಂದೂ ಅಲ್ಲ. ಇಲ್ಲಿ ಬಂತು ನೋಡಿ ಬುದ್ಧಿವಾದದ ಪ್ರತಿ ಪಾದನೆಯ ಅಗತ್ಯ.

ಏಕೆಂದರೆ ಒಂದು ಮಾತು ಒಪ್ಪಿಕೊಳ್ಳಲೇಬೇಕು ಮನುಷ್ಯ ಮನುಷ್ಯನಾದದ್ದೇ ಬುದ್ಧಿ ಶಕ್ತಿಯ ಉದಯದಿಂದ ಇನ್ನು ಬದುಕಿಗೆ, ಬಾಳಿನ ಬೆಳವಣಿಗೆಗೆ, ಬುದ್ಧಿಯ ಬಲ

ಬಳಕೆ ಅಗತ್ಯವೇ ಇಲ್ಲವಾಗಿದ್ದರೆ ಅದು ಮನುಷ್ಯನಲ್ಲಿ ಮೂಡಿ ಬರುತ್ತಲೇ ಇರಲಿಲ್ಲ. ಕಾಡಾಡಿಯಾದ ಕೋತಿಯು ಬದುಕಿನ ಹೋರಾಟದ ಒಂದು ಬಿಕ್ಕಟ್ಟಿನಲ್ಲಿ ಹೇಗೋ ತನ್ನ ಮನಸ್ಸಿಗೆ ಹೊಸದೊಂದು ಮಗ್ಗಲು, ತನ್ನ ಭಾಗ್ಯಕ್ಕೆ ಹೊಸತೊಂದು ಮುಖ ಪಡೆದದ್ದೇ ಈ ಬುದ್ಧಿಶಕ್ತಿಯ ಆವಿರ್ಭಾವದಿಂದ. ಆಹಾರ, ನಿದ್ರೆ, ಭಯ, ಮೈಥುನ ಇವೆಲ್ಲ ಎಲ್ಲ ಪ್ರಾಣಿಮಾತ್ರರಿಗೂ ಮನುಷ್ಯನೊಂದಿಗೆ ಸಾಮಾನ್ಯ. ಆದರೆ“ಧರ್ಮೋಽಹಿ ತೇಷಾಂ ಅಧಿಕೋ ವಿಶೇಷಃ” ಎಂದಿದೆ ಒಂದು ಸಂಸ್ಕೃತ ಸುಭಾಷಿತ. ಈ “ ಅಧಿಕೋ ವಿಶೇಷ ”ಕ್ಕೆ ಆ ಸುಭಾಷಿತಕಾರ ಧರ್ಮವೆಂದರೂ ಅದು ಮೂಲತಃ ಧೀ ಶಕ್ತಿ. ಧೀ - ಧೃತಿ - ಧಾರಣೆ - ಧರ್ಮ ಎಲ್ಲವೂ ಬುಡಕಟ್ಟಿನಲ್ಲಿ ಒಂದೇ ಪ್ರಜ್ಞೆ. ವ್ಯಕ್ತಿಗೆ ಧೃತಿಯಾಗಿ, ಸಮಾಜಕ್ಕೆ ಧರ್ಮವಾಗಿ, ಸಂಸ್ಕೃತಿಸಂಪ್ರದಾಯಕ್ಕೆ ಧಾರಣಾ ಶಕ್ತಿಯಾಗಿ ನಿಂತ ಆ ಶಕ್ತಿ ಆದಿಮಾನವನ ಮೆದುಳಿನಲ್ಲಿ ಮೊತ್ತ ಮೊದಲು ಬೆಳಗಿದ ತಿಳಿವಳಿಕೆಯ ಕಿಡಿ. ಕಿಡಿಯು ಕೆಂಡವಾಗಿ, ಕೆಂಡದಿಂದ ಜ್ವಾಲೆಯೆದ್ದು ಜ್ವಾಲೆ ಜೋತಿರ್ಮಾಲೆಯನ್ನೇ ಬೆಳಗಿ ನಾಗರಿಕತೆಯ ನಿತ್ಯ ದೀಪೋತ್ಸವವನ್ನು ಮಾರ್ಪಡಿಸಲು ಬೇಕಾದ ಅಗ್ನಿ ವಿದ್ಯೆಯ ಹದ ಹಂಚಿಕೆ ಮತ್ತು ಹೊಂಚು ಮಾನವನ ಅನುಭವವೂ, ಇತಿಹಾಸವೂ, ಸಮಾಜವೂ ಕಲಿತುಕೊಂಡ ಒಂದು ಕ್ರಮ ಪರಿಪಾಕ. ಈ ಪರಿಪಾಕದ ಕ್ರಮ ಇನ್ನೂ ಮುಗಿದಿಲ್ಲ. ವ್ಯಕ್ತಿ ವ್ಯಕ್ತಿಗೂ, ಯುಗ ಯುಗಕ್ಕೂ ತಲೆಮಾರಿನಿಂದ ತಲೆಮಾರಿಗೂ ಈ ಜ್ಞಾನಾಗ್ನಿ ವಿದ್ಯೆ, ಈ

ಬುದ್ಧಿಯ ಉಪಾಸನೆ, ಮತ್ತೆ ಮತ್ತೆ ದೀಕ್ಷೆಗೊಂಡು ನಡೆ
ಬೇಕು. ಕಾಡು ಕಡಿದು ನಾಡು ಮಾಡುವವರು ಮ
ಮತ್ತೆ ಬೆಟ್ಟಸವರಿ ನೆಲ ಹದಗೊಳಿಸದಿದ್ದರೆ ಬಿತ್ತಿದ್ದ
ಕಾಡು ಪಾಲು. ಮಾನವನ ಪಶುತ್ವ ಮತ್ತು ಮನುಷ್ಯ
(ಅಂದರೆ ಬುದ್ಧಿಮತ್ತೆ) ಇವೆರಡರ ನಡುವಿನ ದ್ವಂದ್ವವು ಇದೆ
ರೀತಿ. ಇತಿಹಾಸಕ್ರಮದಲ್ಲಿ ಉತ್ಕ್ರಾಂತಿಯ ವಿಕಾ
ಮಾರ್ಗದಲ್ಲಿ ಬುದ್ಧಿಯ ಉದಯ, ತರ್ಕದ ಉಪಾಯ
ಜ್ಞಾನದ ಸಹಾಯ, ವಿಮರ್ಶೆಯ ಆಶ್ರಯ ಇವೆಲ್ಲ ನಿನ್
ಮೊನ್ನೆಯ ಸಂಗತಿಗಳು. ಅನಾದಿಕಾಲದಿಂದಲೂ ಮೈ
ಯುಂಡು ಅಸ್ತಿಗತವಾಗಿ ಬಂದ ಕಾಡುತನದ ಪಶುತ್ವ
ಸ್ವ-ಭಾವ ಸಹಜವಾಗಿಯೇ ನೆಗೆದೆದ್ದು ಕವಿದು ಹೊಸಹುಟ್ಟಿದ
ವಿಚಾರಶಕ್ತಿಯನ್ನು ವಿಕಾರವಶತೆಯಿಂದ ತತ್ತರಿಸುವಂತೆ
ಮಾಡಿದರೆ, ಹತ್ತಿಕ್ಕುವಂತೆ ಆದರೆ ಸೋಜಿಗವಲ್ಲ. ವಿಕಾರ-
ಪಶುಪ್ರವೃತ್ತಿ ಇವೇ ಮೂಲ ಪ್ರಕೃತಿ. ವಿಚಾರಶಕ್ತಿ ಇನ್ನೂ
ಪೂರ್ತಿ ಅರಗದ ಸಂಸ್ಕೃತಿ. ಅದು ಅರಗಲಿಕ್ಕೆ ಪ್ರಯತ್ನ
ಪೂರ್ವಕವಾದ ಸಂಸ್ಕಾರ ಅಗತ್ಯ. ಅದಕ್ಕಾಗಿಯೇ ಬುದ್ಧಿ
ವಾದದ ಪ್ರತಿಪಾದನೆ ಪುರಸ್ಕಾರಗಳು ಅವಶ್ಯ.

## ೩. ಇಂದಿನಯುಗ-ಅರ್ಜುನನ ಸಂಮೋಹ!

ಈ ಆವಶ್ಯಕತೆ ಎಂದಿಗಿಂತಲೂ ಇಂದಿಗೆ, ಅಶಿಕ್ಷಿತರಿ
ಗಿಂತಲೂ ಸುಶಿಕ್ಷಿತರಿಗೆ ಹೆಚ್ಚು ಕಾಡುತ್ತದೆ. ಇಂದಿನ
ಜೀವನ—ಆಧುನಿಕ ಯುಗದ ಜೀವನ—ಅತ್ಯಂತ ಜಟಿಲ

ಕ್ಲಿಷ್ಟ ಮತ್ತು ಸಂಕೀರ್ಣವಾಗಿದೆ. ಇಂದು ಮನುಷ್ಯ— ಆತ ದಿಲ್ಲಿಯಲ್ಲಿರಲಿ ನ್ಯೂಯಾರ್ಕಿನಲ್ಲಿ ಇರಲಿ ಲಂಡನ್ನಿನಲ್ಲಿ ಉಳಿಯಲಿ, ಬರ್ಲಿನ್‌ದಲ್ಲಿ ಬಾಳಲಿ ಬಿಜಾಪೂರದಲ್ಲಿ, ಬೆಂಗಳೂರಿನಲ್ಲಿ ಬದುಕುತ್ತಿರಲಿ !— ಒಮ್ಮೆಲೆ ಹಲವು ಹಂತ ಗಳಲ್ಲಿ ಬಾಳಬೇಕಾಗಿದೆ. ಹಲವು ಮುಖವಾಗಿ ಬಾಳನ್ನು ಎದುರಿಸಬೇಕಾಗಿದೆ. ಹಲವು ಪಾತಳಿಗಳಲ್ಲಿ ತನ್ನ ಬುದ್ಧಿ-ಭಾವನೆಗಳನ್ನು ಅಣಿಗೊಳಿಸಬೇಕಾಗಿದೆ, ಅಳವಡಿಸಬೇಕಾ ಗಿದೆ. ಅರ್ಜುನನಿಗೆ ಕುರುಕ್ಷೇತ್ರವನ್ನು ಕಂಡು ಆಗದಂಥ ದಿಗ್ಭ್ರಮೆ ಮತ್ತು ದಿಗಿಲು ಇಂದಿನ ಮನುಷ್ಯನಿಗೆ ದಿನದ ಒಂದು ಪತ್ರಿಕೆ ತೆರೆದು ಕಣ್ಣುಹಾಯಿಸಿದರೆ ಉಂಟಾಗದೆ ಇರ ಲಾರದು. ಅಣುವಿಸರಣ, ಆರ್ಥಿಕ ಬಿಕ್ಕಟ್ಟು, ಜಾತೀಯ ಕಲಹ, ಪ್ರಾಂತಿಕ ರಾಜಕಾರಣ, ಅಂತರ್‌ರಾಷ್ಟ್ರೀಯ ಪ್ರಭುತ್ವದ ಪಂದ್ಯಾಟ, ಪೇಟೆಯ ಧಾರಣೆ, ಕಾರ್ಮಿಕರ ಸಂಪು, ಲೈಂಗಿಕ ಸಮಸ್ಯೆಗಳು, ಮಠಾಧಿಪತಿಗಳ ಸಂದೇಶ, ಸಮಾಜವಿಕಾಸಯೋಜನೆಯ ಸಂದೇಹ, ಕಾಂಗ್ರೆಸ್ಸಿನ ಭಿಡೆ, ಕಮ್ಯುನಿಸ್ಟರ ಭಯ, ಅಲ್ಲಿ ಬರಗಾಲ, ಇಲ್ಲಿ ಅಪಘಾತ, ಅತ್ತ ದೊಂಬೆ, ಇತ್ತ ಸೆಮಿನಾರು, ಎರಡು ಉಪಗ್ರಹಗಳು, ಅನೇಕ ಪೂರ್ವಗ್ರಹಗಳು, ಕುಟುಂಬ ಯೋಜನೆಯಿಂದ ಪಂಚ-ವಾರ್ಷಿಕ ಯೋಜನೆಯ ವರೆಗಿನ ಪ್ರಚಾರ ಸಂಭ್ರಮ, ಇವೂ ಅಲ್ಲದೆ ಸಹಸ್ರಾರು ಜಾಹಿರಾತುಗಳು, ಸೂಚನೆಗಳು ಸಂದರ್ಶನಗಳು- ಯಾವದು ಓದಲಿ, ಯಾವದು ಬಿಡಲಿ, ಯಾವದು ನಂಬಲಿ, ಯಾವದು ನೆನಪಿಡಲಿ, ಹೇಗೆ ತಿಳಿಯಲಿ, ಯಾಕೆ ತಿಳಿಯಲಿ ? ಎಂದೆಲ್ಲ ಮನಸ್ಸು ನುಚ್ಚು ನೂರಾಗು-

ತ್ತದೆ, ನುಗ್ಗು ನುಗ್ಗಾಗುತ್ತದೆ. ಏನಾದರೊಂದು ನಿರ್ಣ ಮಾಡದೆ ಉಳಿಗಾಲವಿಲ್ಲ. ನಾವು ನಿರ್ಣಯಿಸದಿದ್ದರೆ ನವ ಸರಕಾರವೋ, ರಾಜಕೀಯ ಪಕ್ಷವೋ, ಅಂತರ್ ರಾಷ್ಟ್ರೀಂ ಬಲದ ಸತ್ತೆಯೋ, ದೇಶದ ಬಲಿಷ್ಠ ಆರ್ಥಿಕವರ್ಗವೊ ನಮ್ಮನ್ನು ಆಳುವ ಮತವೋ, ಮಠವೋ, ಮುಂದಾಳುವೊ ನಮ್ಮ ಬಗ್ಗೆ ನಿರ್ಣಯ ಮಾಡೇ ಬಿಡುತ್ತಾರೆ. ಅದನ್ನಾದರು ತಿಳಿದುಕೊಳ್ಳಬೇಕು. ಅಂತೂ ಈಗಲೇ ಕೂಡಲೇ ಕಟ್ನ ನಿಟ್ಟಾದ ಗಟ್ಟಿಮುಟ್ಟಾದ ಒಂದು ತೀರ್ಮಾನಕ್ಕೆ ಇಂದಿನ ಮನುಷ್ಯ ಬರಲೇಬೇಕು—ಅದೂ ಹಲವು ರಂಗಗಳಲ್ಲಿ ಹಲವು ದೃಷ್ಟಿಗಳಿಂದ ಹಲವು ಉದ್ದೇಶಗಳಿಗಾಗಿ! ಇಂಥಲ್ಲಿ ಬುದ್ಧಿ ಸ್ಥಿಮಿತವಾಗಿರುವದು ಹೇಗೆ? ಇದ್ದ ಬುದ್ಧಿ ಇದ್ದಕ್ಕಿದ್ದಂತೆ ಕೆಲಸಕ್ಕೆ ಬರುವದು ಹೇಗೆ? ಕೆಲಸಕ್ಕೆ ಬಾರದ ಬುದ್ಧಿ ಇದ್ದರೆ ಹೇಗೆ?

ಪ್ರಾಣಿಯ ಉತ್ಕ್ರಾಂತಿ, ಜೀವಿಯ ವಿಕಾಸ ಈ ಲೋಕ ದಲ್ಲಿ ಮನುಷ್ಯನ ಮಟ್ಟಕ್ಕೆ ಬಂದು ತಡೆಯಿತು. ಹೊರಗಿನ ಆವರಣ, ಪರಿಸ್ಥಿತಿ, ಹವೆ, ನೆಲ, ನೀರು ಇತ್ಯಾದಿಗಳ ಗುಣ ದೋಷ ಬವಲಾವಣೆಗಳ ತೆಕ್ಕೆಗೆ ಪೆಟ್ಟಿಗೆ ಸಿಲುಕಿದ ಜೀವಿ ತಾನು ಅದಕ್ಕೆಲ್ಲ ಹೊಂದಿಕೊಂಡು ಬಾಳಲು ಹೊಸ ಇಂದ್ರಿಯ ವನ್ನೋ ಆಕಾರವನ್ನೋ ಅವಯವವನ್ನೋ ಬೆಳೆಯಿಸಿಕೊಂಡು ಮಾರ್ಪಡುತ್ತ ಬೇರ್ಪಡುತ್ತ ಉತ್ಕ್ರಾಂತಿವಿಕಾಸವು ವಿವಿಧ ವಾಗಿ ವಿಪುಲವಾಗಿ ವಿಸ್ತಾರಗೊಂಡು ಮಾನವನ ತನಕ ಬಂದಿತು. ಖುರಗಳನ್ನೋ, ಚರ್ಮವನ್ನೋ, ರೊಣೆಯನ್ನೋ

ಗೋಣನ್ನೋ, ಮೈಕಟ್ಟನ್ನೋ, ಮುಖಚರ್ಯೆಯನ್ನೋ, ಬಣ್ಣವನ್ನೋ, ಕಣ್ಣನ್ನೋ ಬೆಳೆಸಿಕೊಂಡು ಬದಲಿಸಿಕೊಂಡು ಪ್ರಾಣಿಜೀವ ಹೊರ ಬದುಕಿಗೆ ತಾನು ಸರಿಹೋಗುವ ಏರ್ಪಾಟು ಮಾಡಿಕೊಂಡಿತು. ಆದರೆ ಮಾನವನಲ್ಲಿ ಈ ಉತ್ಕ್ರಾಂತಿ ಒಮ್ಮೆಲೇ ಕ್ರಾಂತಿಯ ರೂಪ ತಾಳಿತು-ಒಂದು ವಾಕ್ಯಕ್ಕೆ ಪೂರ್ಣವಿರಾಮ ಬಿದ್ದು ಹೊಸ ವಾಕ್ಯ ಅದೇ ಆಶಯವನ್ನು ಹೊಸ ಅರ್ಥದಲ್ಲಿ ಮುಂದುವರಿಸಿದಂತೆ! ಮಾನವನು ಬುದ್ಧಿಯೆಂಬ ಮನಸ್ಸೆಂಬ "ಆರನೆಯ ಇಂದ್ರಿಯ" ವನ್ನು (ಅಂತಃಕರಣವನ್ನು) ಬೆಳೆಯಿಸಿಕೊಂಡನು. ಇದರಿಂದ ಹೊರಬದುಕನ್ನೇ ಪರಿಸ್ಥಿತಿಯನ್ನೇ ತನಗೆ ಸರಿಹೋಗುವಂತೆ ಮಾರ್ಪಡಿಸಲು ಆತ ಹವಣಿಸಿದ. ಹೆಣಗುತ್ತ ಗೆಲ್ಲುತ್ತ ಬಾಳಿನ ಹೊಸ ಹೊಸ ಪಾತಳಿಗೆ ಏರುತ್ತ ನಡೆದ. ಉತ್ಕ್ರಾಂತಿಯು ಇತಿಹಾಸವಾಯಿತು. ಇತಿಹಾಸವು ಸಂಸ್ಕೃತಿಯಾಗಹತ್ತಿತು. ಅಂದರೆ ಬುದ್ಧಿಯೊಂದೇ-ವಿಚಾರ ಶಕ್ತಿಯೊಂದೇ – ಮಾನವನ ಪ್ರಗತಿಯ ಮುಂದಿನ ಉತ್ಕ್ರಾಂತಿಯ, ಸಂಸ್ಕೃತಿಯ ಪೂರ್ಣತೆಯ ಶಕ್ತಿಯಾಗಿದೆ, ಶಸ್ತ್ರವಾಗಿದೆ, ಸಾಧನವಾಗಿದೆ – ಜತೆಗೆ ಇವೆಲ್ಲದರ ಸಿದ್ಧಿಯೂ ಆಗಿದೆ. ಆದ್ದರಿಂದ ಯಾವ ಪಾತಳಿಯಲ್ಲಿಯೇ ಇರಲಿ, ಯಾವ ಸ್ವರೂಪದಲ್ಲಿಯೇ ಆಗಲಿ ಮನುಷ್ಯನು ಬುದ್ಧಿಯ ಮಹತ್ವ ವನ್ನು ಉಪಯೋಗವನ್ನು, ವಿಕಾಸವನ್ನು ಅಥವಾ ವ್ಯವಸಾಯ ವನ್ನು ಕಡೆಗಣಿಸುವಂತಿಲ್ಲ, ತಡೆಹಿಡಿಯುವಂತೆಯೂ ಇಲ್ಲ.

ಮನುಷ್ಯನನ್ನು ಮಿಕ್ಕ ಪ್ರಾಣಿಗಳೊಂದಿಗೆ ಹೋಲಿಸಿ ನೋಡಿರಿ. ಬುದ್ಧಿಯೊಂದು ಬಿಟ್ಟರೆ, ಮನಸ್ಸೊಂದು ಮರೆ

ತರೆ, ಮನುಷ್ಯ ಯಾವ ಪಶುವಿಗೂ ನಿಕೃಷ್ಟ. ಕುದು
ವೇಗ, ನವಿಲಿನ ಚೆಂದ, ಹುಲಿಯ ಭವ್ಯತೆ, ಆನೆಯ ಬಲ
ಚಿಗರೆಯ ಚುಟಿ, ಹಾವಿನ ನಯ, ಗರುಡನ ಠೀವಿ,
ಯಾವ ಬೆಲೆ ಯಾವ ಗುಣ ಇದೆ ಮನುಷ್ಯನಲ್ಲಿ ?
ಗಳಲ್ಲಿ ಒಂದರ ಚರ್ಮ ಇನ್ನೊಂದರ ಹಲ್ಲು ಮತ್ತೊ
ಗರಿ, ಮಗುದೊಂದರ ಎಲುಬು, ಬೇರೊಂದರ ಕೋ
ಇನ್ನಾತರದೋ ಬಾಲ-ಅದೇಕೆ ಕೆಲವರ ಮಲ-ಮೂತ್ರಗ
ಕೂಡ ಮನುಷ್ಯನಿಗೆ ಉಪಯೋಗದವು,ಬೆಲೆ ಬಾಳುವಂಥ
ಆದರೆ ಮನುಷ್ಯನ ಯಾವ ಅಂಗ ಯಾವ ಭಾಗ ಯಾ
ಯಾವ ಬೆಲೆಯದು,ಯಾವ ಉಪಯೋಗದ್ದು? ಪಶುಪಕ್ಷಿ
ಮಹಾಧಿವೇಶನದಲ್ಲಿ ನಿಂತರೆ ಮನುಷ್ಯನೆಂಬ ಪ್ರಾಣಿಯ
ನಿರ್ಬಲ, ನಿರುಪಯೋಗಿ ಮತ್ತು ನಿಕೃಷ್ಟ ಜಂತು ಬೇರೊ
ಇರಲಾರದು ! ಆದಾಗ್ಯೂ ಮನುಷ್ಯ ಎಲ್ಲ ಪ್ರಾಣಿಸ
ಯನ್ನು ಆಳಬಲ್ಲ. ತನ್ನೊಂದಿಚ್ಛೆಗೆ ಆ ಪ್ರಾಣಿಗಳನ್ನು ಪ್ರ
ಯನ್ನೇ ಮಣಿಸಿ ದಣಿಸಿ ಪಳಗಿಸಬಲ್ಲ. ಅವಕ್ಕೆಲ್ಲ ತಾ
ಪ್ರಭುವಾಗಿ ಬಾಳಬಲ್ಲ. ಇದು ಹೇಗೆ ಸಾಧ್ಯ ? ಕೇವ
ಅವನ ಬುದ್ಧಿಯಿಂದ, ವಿಚಾರಶಕ್ತಿಯಿಂದ. ಅಂ
**ಬುದ್ಧಿಶಕ್ತಿಯ ಜೋಪಾಸನೆ, ಬೌದ್ಧಿಕತೆಯ ಉಪಾಸ**
**ಇದೊಂದೇ ಮನುಷ್ಯತ್ವದ ದ್ಯೋತಕ ಮತ**
**ಪೋಷಕ.** ಆದ್ದರಿಂದಲೇ ಬುದ್ಧಿಯ ತೀಕ್ಷ್ಣವನ್ನೂ ಸೂಕ್ಷ್ಮ
ವನ್ನೂ ಅರಿತುಕೊಂಡು ವಿಚಾರತಂತ್ರದ ಶುದ್ಧಿಯನ್ನು
ಸಿದ್ಧಿಯನ್ನೂ ಸಾಧಿಸುವ ಧ್ಯಾಸವೂ ಅಭ್ಯಾಸವೂ ನಾ
**ಮಾಡಿದಷ್ಟು ಕಡಮೆ.**

## ೪. ಕನ್ನಡಿಗರು ಬುದ್ಧಿಪ್ರಧಾನರೇ ?

ಆದರೆ ಆ ನಿಟ್ಟಿನಲ್ಲಿ ನಮ್ಮ—ವಿಶೇಷತಃ ಕನ್ನಡಿಗರ ಪ್ರಯತ್ನ ಸಾಕಷ್ಟು ಆಗಿಲ್ಲ. ಕರ್ನಾಟಕವು ಎಂದಿನಿಂದಲೂ ಬುದ್ಧಿಗಿಂತ ಹೆಚ್ಚು ಭಾವನೆಗಾಗಿ ಭಕ್ತಿಶ್ರದ್ಧೆಗಾಗಿ ಹೆಸರು ಗಳಿಸಿತು, ಹೆಮ್ಮೆ ಪಟ್ಟಿತು. ನಮ್ಮ ಗತವೈಭವ ಏನೇ ಆಗಿದ್ದರೂ ಆಧುನಿಕ ಕಾಲದಲ್ಲಿ ನಾವು ಕೇವಲ ಅನುಕರಣ ಅಂಧಾನುಕರಣ ಶೀಲರಾಗಿ ಕೆಟ್ಟೆವು. ಹನುಮನುದಿಸಿದ ಈ ನಾಡಿನಲ್ಲಿ ಕೊನೆಗೂ ಸ್ವತಂತ್ರ ಪ್ರತಿಭೆ ಸಾಮಾಜಿಕ ರಂಗದಲ್ಲಿ ಪ್ರಕಟವಾದದ್ದು ಸೇವಾ ಸಂಘಟನೆಯಲ್ಲಿ, ಅನುಯಾಯಿಗಳ ಆದರ್ಶ ಉಂಟುಮಾಡುವದರಲ್ಲಿ. ನಮ್ಮಲ್ಲಿ ತ್ಯಾಗಕ್ಕೆ ತಪಸ್ಸಿಗೆ, ತತ್ವಪ್ರಚಾರಕ್ಕೆ, ಸಾರ್ವಜನಿಕ ಕಾರ್ಯಕ್ಕೆ ಪಾಂಡಿತ್ಯಕ್ಕೆ, ಕಾವ್ಯಪ್ರತಿಭೆಗೆ, ಕಲಾಪ್ರೌಢಿಮೆಗೆ ರಾಜಕಾರಣ ಪಟುತ್ವಕ್ಕೆ, ವ್ಯವಹಾರದಕ್ಷತೆಗೆ ಯಾವದಕ್ಕೂ ಕೊರತೆ ಇಲ್ಲ. ಆದರೆ ಸ್ವತಂತ್ರ ವಿಚಾರಕ್ಕೆ ? ಮೌಲಿಕ ಸಂಶೋಧನಕ್ಕೆ ? ಬೌದ್ಧಿಕ ಮುಂದಾಳುತನಕ್ಕೆ ?-ಎಷ್ಟು ಉದಾಹರಣೆಗಳು ಸಿಗಬಲ್ಲವು ? ಮುಖ್ಯ ಮಾತೆಂದರೆ ಕನ್ನಡನಾಡು ಬುದ್ಧಿವಾದಿಯಾಗಿಲ್ಲ. ಕನ್ನಡಿಗರು ಭಾವಜೀವಿಗಳು. ಬುದ್ಧಿ ಜೀವಿಗಳಲ್ಲ. ನಾವು ಭಾವಜೀವನದ ಎತ್ತರವನ್ನು ಕಂಡವರು. ಅದರ ದೈನ್ಯವನ್ನೂ ಈಗ ಉಣ್ಣುತ್ತಿದ್ದೇವೆ.

ಈ ದೈನ್ಯಕ್ಕೆ ಇನ್ನು ಮುಂದೆ ಅವಸರವಿಲ್ಲ. ಅಖಂಡ ಕರ್ನಾಟಕದ ಹೃದಯಗಳ ಏಕೀಕರಣ ಇನ್ನೂ ಸಾಧ್ಯವಾಗದೇ

ಇದೆ ಏಕೆ? ಆ ಹೃದಯಗಳನ್ನು ಹೇಗೆ ಎರಕ ಹ
ಬೇಕೆಂಬ ಚಾತುರ್ಯದ ತಂತ್ರ ಹೂಡುವ ಬುದ್ಧಿ ಪ್ರ
ನಮಗೆ ಇಲ್ಲವಾಗಿದೆ. ನವ ಮೈಸೂರು ರಾಜ್ಯದಲ್ಲಿ ಬ
ಕ್ಕಿಂತಲೂ ಉಕ್ಕಿಗೆ ಪ್ರತಿಷ್ಠೆ ಹೆಚ್ಚಾಗಬೇಕು. ಭ
ಗಿಂತಲೂ ಬುದ್ಧಿಗೆ ಪ್ರಾಶಸ್ತ್ಯ ಹೆಚ್ಚು ದೊರೆಯಬೇಕು.
ವಾದರೆ ನಮ್ಮ ಸಾಂಸ್ಕೃತಿಕ ಪುನರ್ಜನ್ಮ ಶಕ್ಯವಿಲ್ಲ. ಕ
ಟಕವು ವಿಜಯನಗರದ ನಂತರ ಇಂದಿಗೇ ಒಂದು
ರಾಷ್ಟ್ರವಾಗಿ ತಲೆಯೆತ್ತಿದೆ. ಆದರೆ ಎತ್ತಿದ ತಲೆಯ
ಮಿದುಳು ಒಂದು ವಿದ್ಯುತ್ ಕೇಂದ್ರವಾಗಬೇಕು.
ಪ್ರಯತ್ನದಿಂದ ಅಭ್ಯಾಸದಿಂದ ವ್ರತಬದ್ಧರಾಗಿ ಬುದ್ಧಿ
ಗಳಾಗದಿದ್ದರೆ, ಜಾತೀಯತೆ, ಲೋಭ, ಲಂಪಟತನ, ಮ
ನಂಬಿಗೆ, ಸಂಕುಚಿತ ಬುದ್ಧಿ, ಹಿಂದುಳಿದ ಮನೋವ
ವ್ಯಕ್ತಿಪೂಜೆ, ಅಂಧಶ್ರದ್ಧೆ, ಸರಂಜಾಮೀ ಪದ್ಧತಿಯ ನಡಾ
ಮತ್ತು ಅಜ್ಞಾನಗಳ ದಾಳಿಯನ್ನು ತಡೆಯಲಾರೆವು. ವಿ
ರದ ಲಂಗರು ಭದ್ರವಾಗಿರದಿದ್ದರೆ, ತರ್ಕಶುದ್ಧ ಬುದ್ಧಿ
ಚುಕ್ಕಾಣಿ ಸರಿಯಾಗಿ ಕೆಲಸಮಾಡದಿದ್ದರೆ ನಮ್ಮ ನಾಡಬಾ
ಹೊಸ ಹಡಗ ವಿಕಾರ ವಿಕ್ಷೋಭದ ಸುಳಿಯಲ್ಲಿ ಪಕ್ಷ
ಪಕ್ಷಗಳ ಸುಂಟರಗಾಳಿಯಲ್ಲಿ ಸಿಲುಕಿ ಪ್ರಮಾದಗಳ ಬ
ಗಳಿಗೆ ಅಪ್ಪಳಿಸಿ ಮುಳುಗಲು ಎಷ್ಟು ಕಾಲಬೇಕು?

**೫. ಜಾಗತಿಕ ಪರಿಸ್ಥಿತಿ ಬುದ್ಧಿಪ್ರಾಧಾನ್ಯಕ್ಕೆ ಪ್ರತಿಕೂಲ**
**ಹೊಸ ಅಂಧಕಾರ ಯುಗ?**

ಇಂಥ ಜಲಪ್ರಳಯ ನಮ್ಮಂಥ ಭಾವಜೀವಿ ಜನಾಂಗ
ಇಂದು ಇನ್ನೂ ಸುಲಭ. ಏಕೆಂದರೆ ಇಂದು ಜಾಗತಿ

## ಹೊಸ ಅಂಧಕಾರ ಯುಗ ?

ಪರಿಸ್ಥಿತಿಯೇ ಬುದ್ಧಿಪ್ರಧಾನವಾದ ಜೀವನ ಯೋಜನೆಗೆ ಪ್ರತಿಕೂಲವಾಗಿದೆ. ಜಗತ್ತಿನ ಎಚ್ಚೆತ್ತ ಮುಂದುವರಿದ ರಾಷ್ಟ್ರಗಳಲ್ಲಿ ಹಿಂದೆ ಎಂದೂ ಇಲ್ಲದಷ್ಟು ಜ್ಞಾನ, ವಿಜ್ಞಾನಗಳ ಪ್ರಗತಿ ಪ್ರಸಾರಗಳಾಗಿವೆ. ವೈಜ್ಞಾನಿಕ ಸಂಶೋಧನ ಶಿಖರಕ್ಕೆ ಮುಟ್ಟಿದೆ. ಮಂಗಳ-ತಿಂಗಳ ಲೋಕಗಳು ನಮ್ಮ ಭೂಲೋಕದ ಅಂಗಳಕ್ಕೆ ಇಳಿದಂತೆ ಆಗಿವೆ. ಆದರೆ **ವೈಜ್ಞಾನಿಕರು ಸಾಧಿಸಿದ ಜ್ಞಾನದ ಪ್ರಗತಿಯು ಎತ್ತರಕ್ಕೆ ಅದನ್ನು ಅನುಭವಿಸುವವರ ಬುದ್ಧಿಶಕ್ತಿಯು ಕೆಲಸ ಮಾಡುತ್ತಿಲ್ಲ.** ಆ ಮೂಲಕವೇ ಇಂದು ಅಣುವಿಜ್ಞಾನ ಭಸ್ಮಾಸುರನ ವರವಾಗಿದೆ. ಪತ್ರಿಕೆ, ರೇಡಿಯೊ, ಸಿನೇಮಾ, ಟೆಲಿವಿಜನ್, ಪ್ರಚಾರೋಪನ್ಯಾಸ, ವಿವಿಧ ವಿಶ್ವವಿದ್ಯಾಲಯಗಳು, ಸರಕಾರೀ ವಾರ್ತಾ ಪ್ರಚಾರ ಸಂಸ್ಥೆ, ಪುಸ್ತಕ ಪ್ರಕಾಶನದ ಸೌಕರ್ಯ, ಸೌಲಭ್ಯ ಭರದಿಂದ ಬೆಳೆಯುವ ಸಾಕ್ಷರತೆ ಸುಶಿಕ್ಷಿತತೆಯ ಪ್ರಮಾಣ ಇವೆಲ್ಲವುಗಳ ಫಲವಾಗಿ ಹಿಂದೆ ಎಂದೂ ಇಲ್ಲದಷ್ಟು ವಿಷಯ ಪರಿಜ್ಞಾನ ಹಾಗೂ ವಿಚಾರ ಖಾದ್ಯ ಜನಸಾಮಾನ್ಯರಿಗೂ ಸಿಗುವಂತೆ ಆಗಿದೆ. ಆದರೇನು ? ಅಗ್ನಿಮಾಂದ್ಯವಿದ್ದವನಿಗೆ ಹೆಚ್ಚು ಉಂಡಷ್ಟು ವಿಷವೇ. ಅದೇರೀತಿ ಮೇಧಾವಿತನವಿಲ್ಲದ ಮಿದುಳಿಗೆ ಒಟ್ಟಿದ ಇದೆಲ್ಲ ಮಾಹಿತಿಯ ಮುದ್ದೆ ಬುದ್ಧಿಮಾಂದ್ಯಕ್ಕೆ ಜಡ್ಡಾಗಿಯೇ, ಮನಸ್ಸಿಗೆ ಒಂದು ಸಾಂಕ್ರಾಮಿಕ ಜಾಡ್ಯವಾಗಿಯೇ ಪರಿಣಮಿಸಿದೆ. " ಏನೇನೋ ನಡೆಯುತ್ತಿದೆ. ನಡೆಯುವದೆಲ್ಲ ನೆಮ್ಮದಿಯಾಗಿಲ್ಲ. ಎಲ್ಲೋ ಏನೋ ಕೀಲ ತಪ್ಪಿದೆ.

ಏನಾಗಬಹುದು ? ಹೇಗಾಗಬಹುದು ?" ಎಂಬ
ಚಕಿತ ಚಿಂತಾತುರ ಮನೋಭಾವನೆಯೊಂದೇ ಇಂದು
ದವರ ಪಾಡಿನ ಸ್ಥಾಯೀ ಭಾವವಾಗಿದೆ.

ಇಂಥ ಸಂದರ್ಭದಲ್ಲಿ ನಮ್ಮ ಜನರ ಸ್ಥಿತಿ ಬೇರೆ
ಬೇಕೇ ? ಭಾರತದಲ್ಲಿ ಬ್ರಿಟಿಶರ ಆಳಿಕೆ ಮೊದಲಾದಂ
ಅದರ ಪ್ರತಿಕ್ರಿಯೆಯಾಗಿ ರಾಷ್ಟ್ರೀಯತೆ ತಲೆಯೆ
ಬ್ರಿಟಿಶರು ಸ್ಥಾಪಿಸಿದ ಶಾಲೆ ಕಾಲೇಜುಗಳಲ್ಲಿ ಬ್ರಿಟಿಶ ಮ
ಸಾಹಿತಿ ಕವಿಪುಂಗವರ ಕೃತಿಗಳನ್ನು ಉರುಹಾಕಿ ಹೊ
ನಮ್ಮ ಹಿಂದಿನ ತಲೆಮಾರುಗಳ ಪದವೀಧರರು ವ್ಯವಹಾ
ನಿರುಪಯೋಗಿ, ಉಪಜೀವಿಕೆಗೆ ನಿರುದ್ಯೋಗಿ, ಮನಸಿ
ಅಸಂತುಷ್ಟರಾದರೂ ಮೆಕಾಲೆ, ಮಿಲ್, ಮಾಥ್ಯೂಅ
ಲ್ಡರೀ ಮುಂತಾದವರನ್ನು ಓದಿ ಶೆಲ್ಲಿ, ಕೀಟ್ಸ ಮುಂತಾ
ಕಾವ್ಯಕ್ಕೆ ಮನಸೋತು, ಒಂದು ಅಪೂರ್ವ ವಿಚಾರ ಜ
ತಿಯ ವರ್ಚಸ್ಸಿಗೆ ಒಳಗಾಗಿ ಬಂದರು. ಆ ಮೂಲಕ ಅವ
ತಲೆಯೆತ್ತಿದ ಧುರೀಣರಲ್ಲಿ ರಾಷ್ಟ್ರೀಯತೆಯ ಭಾವನೆಯೊಂ
ಆದರ ಬೆನ್ನಿಗೇ ಒಂದು ಬುದ್ಧಿವಾದೀ ಉದಾರ ಮತಭ
ನೆಯು — ಯಾವದಕ್ಕೆ ಬ್ರಿಟಿಶ ರಾಜಕೀಯದಲ್ಲಿ ಲ
**ರ್‍ಯಾಲಿಝಂ** ಅನ್ನುವರೋ ಅದರ ಸಂಸ್ಕಾರ - ಉಂ
ಯಿತು. ಸುರತ ಕಾಂಗ್ರೆಸ್ಸಿನತನಕವೂ ಸಾಮಾನ್ಯವ
ಈ ಲಿಬರಲ್ ಮನೋಭೂಮಿಕೆ ನಮ್ಮ ದೇಶದ ಮುಂದಾ
ಗಳದಿತ್ತು. ಮುಂದೆ ದೇಶದ ಬೆಳೆಯುವ ದಾರಿದ್ರ
ದೈನ್ಯ, ಅಸಂತೋಷ ಮತ್ತು ನಿರಾಶೆಗಳ ಫಲವಾಗಿ ರಾಷ್ಟ್ರ

ಯತೆಯಲ್ಲಿ ಬಿರುಸೂ ಒಗರೂ ಹೆಚ್ಚಾಗತೊಡಗಿತು. ಮಿದು ಳುಗಳು ಕಾಯಹತ್ತಿದಾಗ ಶಾಂತ ವಿಚಾರಕ್ಕೆ ಸಮಗ್ರ ವಿಚಾರಕ್ಕೆ ಇಂಬೆಲ್ಲಿ? ಟಿಳಕರಿಂದ ಆರಂಭವಾದ ಈ "ಭಾರತೀಯ ಅಸಂತೋಷ"ವು ಮಹಾತ್ಮರ ಯುಗದಲ್ಲಿ ಒಂದು ಯಜ್ಞ ಕುಂಡವಾಗಿ ಧಗಧಗಿಸಹತ್ತಿತು. ಅಸಹ ಕಾರ, ಸತ್ಯಾಗ್ರಹ, ಕರ ನಿರಾಕರಣೆ ಇವೆಲ್ಲ ಆಂದೋಲನ ಗಳ ದಾರಿ ಹಿಡಿದು ರಾಷ್ಟ್ರವು ಹೊಸ ಯುಗದಲ್ಲಿ ಧುಮು ಕಿತು. ರಾಜಕೀಯ ದೃಷ್ಟಿಯಿಂದ ಇದು ಅನಿವಾರ್ಯ ವಿತ್ತು. ಆದರೆ ಭಾರತದ ಬೌದ್ಧಿಕ ವಿಕಾಸದ ದೃಷ್ಟಿಯಿಂದ ಇದರ ದುಷ್ಪರಿಣಾಮವೂ ಅಷ್ಟೇ ಅಪರಿಹಾರ್ಯವಾಯಿತು. ಆ ದುಷ್ಪರಿಣಾಮವೆಂದರೆ ಭಾರತದ ಸಾರ್ವಜನಿಕ ಸುಶಿಕ್ಷಿತ ನಾಯಕತ್ವದ ಲಿಬರಲ್ ಮನೋಭೂಮಿಕೆ ಕಳಚಿ ಕರಗಿ ಹೋಗುವಾಗ ಅದರೊಡನೆ ತರ್ಕ ಶುದ್ಧ ವಿಚಾರದ ಬುದ್ಧಿ ಪ್ರಾಧಾನ್ಯದ ಒಂದು ನೀತಿಗೂ ತಿಲಾಂಜಲಿ ಕೊಟ್ಟಂತಾ ಯಿತು. ಏಕೆಂದರೆ ಗಾಂಧೀಜಿ ಬರಿಯ ರಾಜಕೀಯ ಧುರೀಣ ರಿದ್ದಿಲ್ಲ. ಮಹಾತ್ಮರೂ ಆಗಿದ್ದರು. ಅವರ ಅಧ್ಯಾತ್ಮ, ಆಳವಾದ ಶ್ರದ್ಧೆ, ಒಂದು ಬಗೆಯ ಭಕ್ತಿ ಮಾರ್ಗ, ಅನೇಕ ವ್ರತ, ದೀಕ್ಷೆ, ವಿಧಿಗಳ ಹೊಸದೊಂದು ಗುರುಪೀಠ ಪದ್ಧತಿ ಇವೆಲ್ಲವಕ್ಕೂ ಹೆಚ್ಚಾಗಿ ದೇಶದ ಸಮಗ್ರ ಆಂದೋಲನ ಗಳನ್ನೇ ಅವರೊಬ್ಬರ — ಅವರಿಗೂ ಸರಿಯಾಗಿ ಅರ್ಥ ವಾಗದ! — "ಒಳದನಿ"ಯ ಪ್ರೇರಣೆಯ ಮೇಲೆ ಅವ ಲಂಬಿಸಿ ಇಡುವ ರೀತಿ, ಇವೆಲ್ಲವುಗಳ ಪರಿಣಾಮವೆಂದರೆ

ಗಾಂಧೀಯುಗದಲ್ಲಿ ಧಾರ್ಮಿಕತೆ, ಗೂಢತೆ, ಮೂಢಭ
ಅಂಧಶ್ರದ್ಧೆ, ಬುದ್ಧಿಗೆ ನಿಲುಕದ ಹಟವಾದ ಇವೆಲ್ಲ
ಗಳಿಂದ ಯುಕ್ತವಾದ ಒಂದು ಭಾವೋದ್ರೇಕದ
ವರಣ ಮಬ್ಬಿನಂತೆ ದೇಶದ ಚಿದಾಕಾಶದಲ್ಲಿ ಹ
ಸ್ವಾತಂತ್ರ್ಯದ ಧ್ರುವತಾರೆಯನ್ನೇ ದಿಟ್ಟಿಸುವ ಭ
ಸುತ್ತಲು ಕವಿದ ಈ ಹೊಸ ಅಂಧಕಾರ ಯುಗದ ಅ
ನಮಗೆ ಆಗಲಿಲ್ಲ. ಭರತದ ನೀರಿನಂತೆ ಸ್ವಾತಂತ್ರ್ಯ ಬ
ಡನೆ ಆ ಯುಗದ ಶುದ್ಧವಾದ ಆವೇಶ, ಆವೇಗ
ಹೋಯಿತು. ಆದರೆ ಅದರ ಸೆಳವಿಗೆ ಬಂದ,
ಹೇಳಿದ ವಿಕಾರಗಳೆಲ್ಲ ಇನ್ನೂ ವಿಕೃತವಾಗಿ ಮಡುವ
ಮಲೆತು, ಅಲ್ಲಲ್ಲಿ ನಿಂತು ದೇಶದ ವಿಚಾರ ಕ್ಷೇತ್ರದಲ್ಲಿ
ಅಸಹ್ಯ ಜವಳು ರಾಡಿಯ ವಿಸ್ತಾರವನ್ನೇ ಉಂಟುವ
ದವು. ಹೀಗೆ ಮಾಡುವದು ಮಹಾತ್ಮರ ಉದ್ದೇಶವಿ
ಆದರೆ ಒಂದು ಆಂದೋಲನ ಸರ್ವತೋಮುಖವಾಗಿ
ದಾಗ ಅದರ ಪ್ರವರ್ತಕರು ಬಯಸಿದ್ದಕ್ಕಿಂತ ಹೆ
ಹಾಗು ಹಲವು ಬಗೆಯ ಪರಿಣಾಮಗಳನ್ನು ಉಂಟು ಮ
ವದು ಅದರ ಗತಿ ಧರ್ಮ. ನಮಗೆ ಇಂದು ಈ ಅ
ಕಾರ ಯುಗದಿಂದ ಹೊರಬರಬೇಕಾಗಿದೆ. ವಿಚ್ಛಕ್ತಿ ಹೊಂ
ಮೂಲದ ಉದಾರಮತ ಭಾವನೆಯ ಬುದ್ಧಿವಾದೀ ಭೂ
ಕೆಯನ್ನು ಜನತೆಯಲ್ಲಿ ಮತ್ತೆ ನೆಲೆಗೊಳಿಸಬೇಕಾಗಿ
ಇಲ್ಲವಾದರೆ ರಾಷ್ಟ್ರಕ್ಕೆ ಉಳಿಗಾಲವಿಲ್ಲ. **ಭಾವಾವ**
**ಒಂದು ಸದಾಕಾಲದ ಸ್ಥಿತಿಯಾಗಲಾರದು. ಹ**
**ಆದರೆ ಅದಕ್ಕೆ ಅಪಸ್ಮಾರ — ಉನ್ಮಾದವೆನ್ನುವ**

ಭಾವಾವೇಶ ಅದ್ಭುತ ಕ್ರಿಯಾಶಕ್ತಿ ನಿಜ. ಆದರೆ ಅದರ ಕ್ರಿಯೆ ಮುಗಿದೊಡನೆ ಸಮಸ್ಥಿತಿಯು ಸಮಂಜಸ ಸ್ಥಿತಿಯು ಸ್ಥಾಪಿತವಾಗಲೇಬೇಕು.

## ೬. ಬುದ್ಧಿಯ ಮೇಲೆ ಹೊಸ ದಾಳಿಗಳು !

ಆದರೆ ಇತ್ತೀಚೆಗೆ ಬುದ್ಧಿಯ ಮೇಲೂ ಬುದ್ಧಿಪ್ರಧಾನತೆಯ ಮೇಲೂ ಹಲವೆಡೆಗಳಿಂದ ಹಲಬಗೆಯಿಂದ ದಾಳಿಗಳಾಗುತ್ತಲಿವೆ. ನಮ್ಮ ಅಸಹಕಾರ ಆಂದೋಲನವೇ ಅಂಥ ಒಂದು ಪ್ರಚಂಡ ದಾಳಿಯಾದಂತೆ ಎಂಬ ಮಾತು ಮೇಲೆ ಬಂದಿದೆ. ಅಶಿಕ್ಷಿತರ, ಅನಾಗರಿಕರ, ಹಳ್ಳಿಯ ಹುಂಬ ಕಗ್ಗರ ಅಥವಾ ಸಾಮಾನ್ಯ ಜನತೆಯ ಸರಳವಾದ ಭಕ್ತಿಭಾವನೆಯ ಮಾತಂತಿರಲಿ, ಅರ್ಧ ಶಿಕ್ಷಿತರಿಂದ ಅತ್ಯುಚ್ಚ ಶಿಕ್ಷಣ ಪಡೆದವರತನಕವೂ ನಮ್ಮಲ್ಲಿ ಆವರಿಸಿದ ಒಂದು ಬಗೆಯ ಕೃತಕ ಶ್ರದ್ಧೆಯು ಅನೇಕ ರೂಪಗಳಲ್ಲಿ ಅನೇಕ ಕೇಂದ್ರಗಳಲ್ಲಿ ಪ್ರಕಟವಾಗುತ್ತದೆ. ಸಾಧುಸಂತರ ಸಾಂಪ್ರದಾಯಗಳಿಗೆ ಪ್ರಾಚೀನತೆಯ ಒಂದು ಸ್ವತಃಸಿದ್ಧ ಪ್ರತಿಷ್ಠೆಯಾದರೂ ಇದೆ. ಆದರೆ ಇತ್ತೀಚೆಗೆ ತಲೆದೋರಿದ ಪಾಶ್ಚಾತ್ಯ ಭಾಷೆ-ಭೂಷೆಯ ಪೌರ್ವಾತ್ಯ ಯೋಗಿಗಳೂ ಯತಿಗಳೂ ಅಧ್ಯಾತ್ಮ ಕೇಂಪ್ರಗಳೂ ಹಳೆಯ ಸಾಂಪ್ರದಾಯಿಕ ಮಠಾಚಾರ್ಯರ ಮಠ-ಮಂದಿರಗಳ ಮುಂದೆ ಮೇಲಾಟಕ್ಕೆ ನಿಂತು ಅವುಗಳನ್ನು ಹಿಮ್ಮೆಟ್ಟಿಸಿವೆ. ಅದೇ ರೀತಿ ಬುದ್ಧಿವಾದದ ಮೇಲೆ ಇನ್ನೊಂದು ಪ್ರಚಂಡ ದಾಳಿ ನಡೆದ ನಿಟ್ಟು ಕಮ್ಯು

ನಿಸ್ಟರದು. ಆರಂಭದ ಧರ್ಮಪ್ರಸಾರಕರ ಆವೇಶ
ವೇಶ ಈ ಕಮ್ಯುನಿಸ್ಟರಲ್ಲಿ ಉಕ್ಕಿ ಹೊಮ್ಮುತ್ತದೆ.
ವಾತಾವರಣದಲ್ಲಿ ವಿಚಾರಶಕ್ತಿ ಕುಂಠಿತವಾದರೆ,
ಬಧಿರವಾದರೆ, ಮತಸ್ವಾತಂತ್ರ್ಯ ದ್ರೋಹವೆ
ಆಶ್ಚರ್ಯವೇನು ?

ಇಂತಹ ದಾಳಿಗಳಲ್ಲಿ ಎಲ್ಲಕ್ಕೂ ಮೋಹಕವಾದ
ಆದ್ದರಿಂದಲೆ ಅತ್ಯಂತ ಘಾತುಕವಾದದ್ದು - ಗೂಢವ
ರಹಸ್ಯರಮ್ಯತೆಯ - ಅನುಭಾವ ಸಂಪ್ರದಾಯದ
ಈ ಅನುಭಾವವನ್ನು ವಿಚಾರವಾದಿಗಳೂ ವಿವೇಕವಾದಿ
ಬುದ್ಧಿಪ್ರಾಮಾಣ್ಯವಾದಿಗಳೂ ತೆಕ್ಕೆಬಿದ್ದು ಪ್ರತಿ
ಬೇಕಾಗಿದೆ –ಅಂದರೆ ಬಲಾತ್ಕಾರದಿಂದಲ್ಲ, ತಮ್ಮ
ಸರಣಿಯ ಎಲ್ಲ ಶಕ್ತಿ ಸಾಮರ್ಥ್ಯದಿಂದ. ಕತ್ತಿಯ ಕ
ಕುಗ್ಗದ ಕಲಿಯು ಹಗುರಾದ ಹೂವಿನ ಹಾರಗಳ
ಯಡಿಗೆ ಹಾಯಾಗಿ ಕರಗುವನು. ತನ್ನ ಮಾಧುರ್ಯ
ಕಾವ್ಯಮಯತೆಯಿಂದ ಗೂಢಗುಂಜನದಿಂದ ಬುದ್ಧಿಯ
ಬಧಿರಗೊಳಿಸುವ ಅನುಭಾವದ ಆಕ್ರಮಣವು ಅ
ದಾಗಿದೆ. ಹಿಂದೆ ನಮ್ಮ ಪುರಾಣಾಂತರಗಳಲ್ಲಿಯ ಮಹ
ತಪಸ್ವಿಗಳು ಅಪ್ಸರೆಯರಿಗೆ ಮನಸೋತು ಕೆಟ್ಟಂತೆ ಇಂ
ಅನೇಕಾನೇಕ ಪ್ರತಿಭಾವಂತರೂ ವಿಜ್ಞಾನಿಗಳೂ ತತ್ವವೇತ್ತ
ಅತ್ಯುಚ್ಚ ಪದವೀಧರರೂ ವರಿಷ್ಠ ನ್ಯಾಯಾಧೀಶ
ರಾಜಕಾರಣಿಗಳೂ ಬೇರೆ ಬೇರೆ ಮಟ್ಟದ "ಗುರುತ
ಕರ್ಷಣೆಗೆ ಬಲಿಯಾಗಿ ಪರವಶರಾಗಿ ಶರಣು ಹೋದದ್ದು

ನಾವು ನೋಡುತ್ತೇವೆ. ಇದಕ್ಕೆಲ್ಲ ಕಾರಣವೇನು ? ಅವರೆಲ್ಲರೂ ಮೂರ್ಖರೇ ? ಅವರಿಗೆ ಮೇಲ್ಮಟ್ಟದ ನಮನಿಮಗಿಂತ ಹೆಚ್ಚಿನ ಹರಿತವಾದ ಬುದ್ಧಿ ಇದ್ದಿರಬೇಕಲ್ಲವೇ ?

## ೭. ಬುದ್ಧಿಶಕ್ತಿಯ ಜೀವಾಳದ ಭೇದ- 'ವಿಜ್ಞಾನ' ಮತ್ತು 'ಪ್ರಜ್ಞಾನ'

ಆದರೆ ಇಲ್ಲಿ ಬುದ್ಧಿಯ ಕುರಿತು ಮಾತನಾಡುವಾಗ ಒಂದು ಜೀವಾಳದ ಭೇದವನ್ನು ನಾವು ಲೆಕ್ಕಿಸಬೇಕು. ಬುದ್ಧಿ, ಬೌದ್ಧಿಕತೆ-ಎಂದಾಗೆಲ್ಲ ನಾವು ಉಲ್ಲೇಖಿಸುವ ಮಾನವೀಶಕ್ತಿ ಯಾವದು ? ಅದು ಮನುಷ್ಯತ್ವದ ಮನಸ್ತತ್ವದ ಯಾವ ಅಂಶ ? ಯಾವ ಅಂಗ ? ಮುಖ್ಯವಾಗಿ ನಾವು ಮಾಡಬೇಕಾದ ಭೇದ ಬುದ್ಧಿಯ ಎರಡು ತರಗತಿಗಳಲ್ಲಿ- ಒಂದನೆಯದು **ವಿನಿಯುಕ್ತ ಬುದ್ಧಿ**, ಎರಡನೆಯದು **ವಿಶುದ್ಧ ಬುದ್ಧಿ.** ಇಂಗ್ಲಿಷ ಭಾಷೆಯಲ್ಲಿ ಅದಕ್ಕೆ **ಇಂಟೆಲಿಜೆನ್ಸ** (Intelligence) ಅಂದರೆ ಇದಕ್ಕೆ **ರೀಝುನ್** (Reason) ಅನ್ನುವದು ವಾಡಿಕೆ. ತೈತ್ತರೀಯ ಬ್ರಾಹ್ಮಣದಲ್ಲಿ ಬುದ್ಧಿಯ ಕುರಿತು ಮೂರು ವಿಧವಾಗಿ ಪರಿಭಾಷೆ ಬಂದಿದೆ. ಸಂಜ್ಞಾನ, ವಿಜ್ಞಾನ ಮತ್ತು ಪ್ರಜ್ಞಾನ. ಇಲ್ಲಿ ನಮ್ಮ ವ್ಯಾಖ್ಯೆಗೆ ಹತ್ತಿರವಾಗಿ ಹೋಲುವವು ಮುಂದಿನವೆರಡು - ವಿಜ್ಞಾನ ಮತ್ತು ಪ್ರಜ್ಞಾನ. ಸಂಜ್ಞಾನವೆಂಬುದು ಮೂಲದ ಇಂದ್ರಿಯ ಜ್ಞಾನ ಅಥವಾ ವೇದನೆ-ಅನಿಸಿಕೆ. ಅವುಗಳಿಂದಾಗಿ ವಸ್ತು ವೃತ್ತಿಗಳ ತಿಳುವಳಿಕೆ ಹಾಗೂ ಅಳವಡಿಕೆಯ ಚಾತುರ್ಯ

ಇವು ವಿಜ್ಞಾನದ ಕಕ್ಷೆಯಲ್ಲಿ ಬಂದವು. ಸಾಮಾನ್ಯ
ನಾವು ಬುದ್ಧಿವಂತಿಕೆ ಎನ್ನುವದು ಇದಕ್ಕೇ ಸರಿ.
ದಾರಿಯೇ ವಿದ್ಯೆ, ಇದರ ಗುರಿ ವ್ಯಾವಹಾರಿಕ ಪ್ರಯೋ
ವಿಚಾರಗಳನ್ನೂ ವಿಷಯಗಳನ್ನೂ ವಸ್ತುವಿಶೇಷಗಳ
ತೂಗಿ ತಿಳಿದು ತಳಕು ಹಾಕಿ ತಕ್ಕ ರೀತಿಯಲ್ಲಿ ತಾರ
ದಿಂದ ಅವುಗಳನ್ನು ಬಳಸುವ ಅಳವಡಿಸುವ ಹತೋಟಿ
ಈ ಬುದ್ಧಿವಂತಿಕೆ, ಅಥವಾ ವಿನಿಯುಕ್ತ ಬು
[ ವಿಜ್ಞಾನಶಾಸ್ತ್ರದಲ್ಲಿ ವಿನಿಯೋಜಿತ (Applied) ವ
ವಿಶುದ್ಧ (Pure) ಎಂಬ ವರ್ಗೀಕರಣವಿಲ್ಲವೇ ? ] ಎ
ದಲ್ಲಿ ತೂಗಿಬಿಟ್ಟ ಬಾಳೆಯ ಹಣ್ಣಿಗೆ ಎಟಕುವಂತೆ ಚಿಂಪಾ
ಕೋಡಗವು ಎರಡು ಕೋಲುಗಳನ್ನು ಜೋಡಿಸಿ
ನೋಡುತ್ತದೆ. ಈಗ ಅದು ಇದೇ "ಇಂಟೆಲಿಜೆನ್ಸ" ಅಥ
ವಿನಿಯುಕ್ತ ಬುದ್ಧಿಯನ್ನು ಉಪಯೋಗಿಸುತ್ತದೆ. ನಾವೆಲ್ಲ
ಹಾಗೆಯೇ ನಮ್ಮ ನಿತ್ಯ ಜೀವನದ ದಿನ ಬಳಕೆಯ
ವ್ಯವಹಾರಗಳಲ್ಲಿ ಇದೇ ಬುದ್ಧಿಯಿಂದ ಕೆಲಸ ಮಾಡುತ್ತೇ
ಚಾತುರ್ಯ, ಅಶಿಕ್ಷಿತ ಪಟುತ್ವ, ವ್ಯವಹಾರ ಬು
ಸ್ವಯಂಪ್ರಜ್ಞೆ ಇತ್ಯಾದಿ ಹೆಸರುಗಳು ಇದೇ ಬುದ್ಧಿಗೆ.
ಬುದ್ಧಿಯ ಮುಖ್ಯ ಲಕ್ಷಣವೆಂದರೆ ಅದು ಸಂಗತಿಗಳನ
ಇದ್ದಂತೆಯೇ ಒಪ್ಪಿಕೊಂಡು ನಿಜವೆಂದು ಹಿಡಿದು ಮುಂ
ವರಿಯುತ್ತದೆ. ಇದ್ದ ಸಂಗತಿಗಳನ್ನು ಇಟ್ಟ ಸಂಗತಿಗಳನ
ಕೂಡಿಸಿ ಸರಿಪಡಿಸಿ ಬೇರ್ಪಡಿಸಿ ಮಾರ್ಪಡಿಸಿ ಅವುಗಳಿಂದ ಹೊ
ಸಂಯೋಜನೆಗಳನ್ನು ಮಾಡಿ ತನ್ನ ಮುಂದಿನ ಅನುಕೂಲತೆ
ಅವನ್ನು ಅಣಿಗೊಳಿಸುವದೇ ಈ ವಿನಿಯುಕ್ತಬುದ್ಧಿಯ

ಕೆಲಸ. ಅಂದರೆ **ವಿನಿಯುಕ್ತ ಬುದ್ಧಿಯೆಂದರೆ ವ್ಯಕ್ತಿಯ ಪ್ರಾಣಿಮಟ್ಟದ ಪಶುಪಾತಳಿಯ ಬದುಕಿಗೆ ಬೇಕಾದ ಕೆಲಸಕ್ಕೆ ಅಣಿಯಾದ ವಿಚಾರಶಕ್ತಿ.**

ಆದರೆ ವಿಶುದ್ಧ ಬುದ್ಧಿಯು ವಸ್ತುಗಳ ಅಳವಡಿಕೆ, ಅಣಿಗೊಳಿಸುವಿಕೆಗಿಂತ ಅವುಗಳ ತಿಳುವಳಿಕೆಯನ್ನೇ ಗುರಿಯಾಗಿಟ್ಟುಕೊಳ್ಳುತ್ತದೆ. ತೋರಿಕೆಯ ಆಚೆಗೆ, ಪಾತಳಿಯ ಕೆಳಗೆ ನೋಡುತ್ತದೆ. ತಿರುಳನ್ನು ತಿಳಿಯುತ್ತದೆ. ವಾಸ್ತವತೆಯ ತಥ್ಯವನ್ನು, ಅರ್ಥದ ಮರ್ಮವನ್ನು, ಸಂಗತಿಯ ಸತ್ಯವನ್ನು ಗುರುತಿಸುವದು ವಿಶುದ್ಧ ಬುದ್ಧಿಯ ಕೆಲಸ. ಈ ಕೆಲಸದ ಉದ್ದೇಶವೇನು? ಇದಕ್ಕೆ ಉಪಯೋಗವಿಲ್ಲವೆ? ಇದೆ. ಆದರೆ ಈ ಉಪಯೋಗ ವ್ಯಾವಹಾರಿಕ ಅಥವಾ ಭೌತಿಕ ಬದುಕಿನದಲ್ಲ. ಅದು ಮಾನಸಿಕ ಮತ್ತು ಆಧ್ಯಾತ್ಮಿಕ ಜೀವನದ್ದು. ಪ್ರತ್ಯಕ್ಷ ಜೀವನದ ವಾಸ್ತವ ಪ್ರಪಂಚದ ಪಾಲಿಗೆ ಬರುವ ಅನುಭವದ ಒಳಗಿನ ಶಕ್ತಿಗಳನ್ನು ಅರಿತುಕೊಂಡು ಅವುಗಳಿಂದ ಭವಿತವ್ಯದ ಅನುಮಾನಗಳನ್ನು ಕಟ್ಟುವ ಮಟ್ಟಿಗೆ ಈ ವಿಶುದ್ಧ ಬುದ್ಧಿಯ ಅಥವಾ ಪ್ರಜ್ಞೆ ಇಲ್ಲವೆ "ಪ್ರಜ್ಞಾನ"ದ ವ್ಯಾವಹಾರಿಕ ಉಪಯೋಗ. ಇಂಥ ಪ್ರಜ್ಞಾನ ಸಹಜವಾಗಿ ಬೆಳೆದು ಬರುವ ಕಸುವಲ್ಲ; ಕಸಬಲ್ಲ. ಈ ಪ್ರಜ್ಞಾನಕ್ಕಾಗಿ, ವಿಶುದ್ಧ ಬುದ್ಧಿಗಾಗಿ ಮೂಲತಃ ಬೇಕಾದದ್ದು ಅಂತರಂಗದ ಒಂದು ಸುಸಂಬದ್ಧತೆ. ಅದಕ್ಕೆ ಅವಶ್ಯವಾದದ್ದು ತನ್ನತನದ ಅರಿವು. ತಿಳಕೊಳ್ಳುವ ತಾನು ತಿಳಕೊಳ್ಳಬೇಕಾದ ವಿಷಯದಿಂದ ವಿಶ್ವದಿಂದ ಬೇರೆಯೆಂಬ

ವಿಂಗಡವೆಂಬ ಅನಿಸಿಕೆ ಪ್ರಜ್ಞಾನದ ಮೂಲಾಧಾರ. ನನ
ಒದಗುವ ಅನಿಸಿಕೆ, ತೋರಿಕೆ. ವಿಚಾರ ಅಭಿಪ್ರಾಯಗಳಿ
ನಾನು ಕೇವಲ ನಿಷ್ಕ್ರಿಯ ತಟಸ್ಥ ಸಾಕ್ಷಿಯಾಗಿದ್ದರೇ
ನಾನು ಅವುಗಳನ್ನೂ ತೂಗಿ ನೋಡಬಲ್ಲೆ; ಅವುಗಳ ಹಿನ್ನೆಲೆಯ
ಹುರುಳನ್ನೂ ಅರಿತುಕೊಳ್ಳಬಲ್ಲೆ.

ಇದನ್ನೆ ಇನ್ನೊಂದು ರೀತಿ ಸ್ಪಷ್ಟೀಕರಿಸಬಹುದು
ಒಂದು ಯಂತ್ರವಿರಲಿ, ಒಂದು ಸರಕಾರವಿರಲಿ, ಅಂಥ ದೊಡ್ಡ
ಪರಿಮಾಣದ ಒಂದು ಭಾಗವನ್ನಷ್ಟೇ ವಿನಿಯುಕ್ತ ಬುದ್ಧಿಯು
ವ್ಯವಹರಿಸಬಲ್ಲದು. ಆದರೆ ವಿಶುದ್ಧ ಬುದ್ಧಿಯು ವಿಕಾಸ
ಗೊಳ್ಳಬೇಕಾದರೆ ಅದು ಇಂಥ ಬಿಡಿ ವಿವರಗಳೊಂದಿಗೆ
ಹೊಂದಿಕೊಂಡರಾಗದು. ಅದಕ್ಕೆ ಇಡಿಯ ನೋಟ, ಒಟ್ಟು
ವಸ್ತು ಸಾಕಲ್ಯದ ದೃಷ್ಟಿ ಸಮಗ್ರತೆಯ ಗಮನಗಳೊಂದಿಗೆ
ಗತಿಗೂಡಬೇಕು. ನಮ್ಮ ಕಣ್ಣು ಕಿವಿಗಳು ಕೆಲವೊಂದು
ವಿದ್ಯುತ್ ಅಲೆಗಳ ಅಳತೆಯ ಒಳಗೆ ಚೆನ್ನಾಗಿ ಕಾರ್ಯ
ಮಾಡಬಲ್ಲವು. ಆ ತೆಕ್ಕೆ ಮೀರಿದಲ್ಲಿ ಅವು ಇದ್ದೂ
ಕುರುಡು, ಕಿವುಡು. ಅದೇ ರೀತಿ ವಿಶುದ್ಧ ಬುದ್ಧಿಯೂ
ತನ್ನ ಆಕಲನದ ಪರಿಮಿತಿಯಲ್ಲಿಯೇ ಬರುವ ಸಂಗತಿಯನ್ನು
ಇಡಿಯದಾಗಿ ಎಲ್ಲ ಮಗ್ಗಲುಗಳಿಂದ ನೋಡಲು ಬದ್ಧ
ವಾಗಿದೆ. ಆಕಲನದ ಒಂದು ಅಳತೆಯ ಆಯವನ್ನೂ
ಮಾತ್ರವನ್ನೂ ಮೀರಿದಾಗ ವಿಚಾರವು ಅವಶ್ಯವಾಗಿ ಅಮೂರ್ತ
ವಾಗುತ್ತದೆ. ಪ್ರಜ್ಞೆಯ ಎಲ್ಲೆ ಮೀರಿ ಭ್ರಮೆಯ ಮಾಯೆ
ಬಲೆ ಬೀಸುತ್ತದೆ.

ಇದನ್ನು ಗಮನಿಸಿದಾಗ ಹಿಂದೆ ಹೇಳಿದ "ಮೋಹ
ಂಮೂಢ ಚೇತಸ್ಸಿ"ನ ಮೇಲೆ ಬೆಳಕು ಬೀಳದಿರದು.
ಧುನಿಕ ಮನುಷ್ಯನು ಇಂದಿನ ಸಂದರ್ಭದಲ್ಲಿ
ಕ್ಷಣದ ವಿಶಿಷ್ಟ ವಿಧಾನದ ಮೂಲಕ ಜ್ಞಾನದ ಶಾಖೋಪ
ಖೆಗಳು ಹೆಚ್ಚಾದ್ದರಿಂದ ವಿಶೇಷಜ್ಞತೆಯ ಹಾಗೂ ಪ್ರತ್ಯೇಕ
ತೆಯ ಕ್ಷೇತ್ರವು ಉತ್ತರೋತ್ತರ ಸಂಕೋಚಗೊಳ್ಳುತ್ತ
ೋಗುವದರಿಂದ, ಒಂದೆಡೆಗೆ ವಿನಿಯುಕ್ತ ಬುದ್ಧಿಯನ್ನೂ
ೃತ್ತಿಯನ್ನೂ ಹೆಚ್ಚು ಹೆಚ್ಚು ಬೆಳೆಸಿಕೊಳ್ಳುತ್ತಾನೆ. ಆದರೆ
ನ್ನೊಂದೆಡೆಗೆ ವಿಶುದ್ಧ ಬುದ್ಧಿಯ ಸಮ್ಯಕ್‌ದೃಷ್ಟಿಯನ್ನೂ
ುಗ್ರದೃಷ್ಟಿಯನ್ನೂ ಪ್ರಜ್ಞಾನದ ಶಕ್ತಿಯನ್ನೂ ಕ್ಷೀಣಗೊಳಿಸಿ
ಳ್ಳುತ್ತಾನೆ. ತನ್ನ ಎದುರಿನ ವಾಸ್ತವಪ್ರಪಂಚದ
ೀಕ್ಷಣೆಗೆ ಆತ ಹೋಗುವದಿಲ್ಲ. ಅದಕ್ಕೆ ಬೇಕಾದ
ತುವು ಬಯಕೆ ಯಾವದೂ ಅವನಿಗೆ ಇಲ್ಲ. ಏಕೆಂದರೆ
ನ ಬಾಳಿನ ಪಲ್ಲವಿಯು ಮಿಡಿಯುವ ಶ್ರುತಿ ಜಿಜ್ಞಾಸೆ
. ಅದು ವ್ಯಾವಹಾರಿಕ ಯಶಸ್ಸು; ಸಾರ್ವಜನಿಕ
ಷ್ಠೆ. ವಾಸ್ತವತೆಯನ್ನು ಆತ ಇದ್ದಂತೆ ಒಪ್ಪಿಕೊಂಡು
ಂದುವರಿಯುತ್ತಾನೆ. ಅದರ ಒಳ ಹೊಕ್ಕು ಆಚೆಗೆ
ಯ್ದು ನೋಡುವ ಅಗತ್ಯ ಅವನಿಗೆ ಅನಿಸುವದಿಲ್ಲ.
ರಿಂದ ಎಂಥ ಮೇಧಾವಿಯಾದರೂ ತನ್ನ ಕ್ಷೇತ್ರದಲ್ಲಿ
ಾಧಾರಣ ಬುದ್ಧಿಮತ್ತೆ-ಅಂದರೆ ವಿಶೇಷ ಪ್ರಭಾವಿಯಾದ
ತ್ತೆ !-ತೋರಿಸಿದ್ದರೂ ಅನುಭಾವ,ಅಧ್ಯಾತ್ಮ,ಅತೀಂದ್ರಿಯ
ವೆಲ್ಲ ಲೌಕಿಕವಲ್ಲದ ಭೌತಿಕವಲ್ಲದ ಪ್ರಪಂಚದಲ್ಲಿ ಮಂಕು
ದಂತಾಗುತ್ತಾನೆ.

## ೮. ವಿಜ್ಞಾನದ ವೃದ್ಧಿಯೊಂದಿಗೆ ಪ್ರಜ್ಞಾನದ ಕ

ಎರಿಕ್ ಫ್ರಾಂ ಎಂಬ ಒಬ್ಬ ವಿಖ್ಯಾತ ವಿಚಾರವ ತನ್ನ "ಸೇನ್ ಸೊಸಾಯಿಟಿ" ಎಂಬ ಗ್ರಂಥದಲ್ಲಿ ಪ್ರಾಯಪಟ್ಟಂತೆ ಪಾಶ್ಚಾತ್ಯ ಜಗತ್ತಿನಲ್ಲಿ "೧೯ನೇ ಶತವ ದಿಂದ ಇಂದಿನ ದಿನಮಾನದ ವರೆಗೂ ಒಡೆದೆದ್ದು ಕಾಣುವ ತಿಳಿಗೇಡಿತನದ ವೃದ್ಧಿಯಾಗುತ್ತ ಬಂದಿದೆ." ಪಾಶ್ಚಾ ಕತೆಯೇ ಇಂತಿದ್ದರೆ ಹಿಂದುಳಿದ ಪೌರ್ವಾತ್ಯರ ಅಲ್ಲಿಂ ಭಾರತೀಯರ ಕನ್ನಡಿಗರ ಪಾಡೇನು ? ಪ್ರತಿಯೊಬ್ಬ ದಿನಪತ್ರಿಕೆಯನ್ನು ಒಳ್ಳೆ ಧಾರ್ಮಿಕ ಶ್ರದ್ಧೆಯಿಂದ ಪ ಯಣ ಮಾಡುತ್ತಾರೆ. ಆದರೇನು ? ಮೊನ್ನೆಯೇ ಶ್ರೀ ಕ ಮೆನನ್ನರು ಹೇಳಿದಂತೆ,"ಅಮೇರಿಕೆಯಲ್ಲಿ ಹೇಗೋ ಹಾಗೆ ಭಾರತದಲ್ಲಿಯೂ ಜನ ಪತ್ರಿಕೆಗಳಲ್ಲಿಯ ತಲೆಬರಹಗಳ ರ್ಷಣೆಗೆ ಬಲಿಬೀಳುತ್ತಾರೆ. ಆದರೆ ಅಮೇರಿಕೆಯ ಜನ ಇಂ ತಲೆಬರಹಗಳನ್ನು ನಾಳೆ ಮುಂಜಾನೆ ಮರೆಯುತ್ತಾ ಭಾರತೀಯರು ಅವನ್ನು ಮೂರು ವರ್ಷಗಳ ತನಕ ನೆನಪಿಡುತ್ತಾರೆ." ಒಟ್ಟಾರೆ ಏನು ? ಆ ಕುರಿತು ಇಬ್ಬ ಸ್ವಂತ ವಿಚಾರ ಮಾಡುವದು ಕಡಮೆ. ನಮ್ಮ ಜನ ಪತ್ರಿ ಓದುವ ಪ್ರಮಾಣದಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾಗು ಸಮಾಚಾರದ ಹಿಂದಿನ ಅಥವಾ ಒಳಗಿನ ರಾಜಕೀ ಮರ್ಮವನ್ನು ಅರಿತುಕೊಳ್ಳುವದು ಬರಿ ಶೂನ್ಯವೇ ! ಪರಿಜ್ಞಾನದ ಅಭಾವ ನಿಜವಾಗಿಯೂ ಭಯಾನಕವಾಗಿ ಇಂದು ನಮ್ಮ ವಿಜ್ಞಾನ, ವಿನಿಯೋಗದ ಬುದ್ಧಿವಂತಿ

ಉಂಟುಮಾಡುವ, ಹುಡುಕಿ ತೆಗೆಯುವ ಅಸ್ತ್ರ. ಆಯುಧಗಳನ್ನು ನಮ್ಮ ಪ್ರಜ್ಞಾನ, ಶುದ್ಧಬುದ್ಧಿಯ ವಿಚಾರವಂತಿಕೆ ಅಂಕೆಯಲ್ಲಿಟ್ಟು ಆಳಲು ಅಸಮರ್ಥವಾಗಿದೆ ! ನಮ್ಮಲ್ಲಿ ಬುದ್ಧಿವಂತಿಕೆಗೆ ಕೊರತೆ ಇಲ್ಲ ಬುದ್ಧಿಮಾಪನ ಪರೀಕ್ಷೆಯಲ್ಲಿ ಮೇಲ್ತರಗತಿಯ ಗುಣಗಳನ್ನು ಅನೇಕರು ಪಡೆಯುತ್ತಾರೆ. ಆದರೆ **ಈ ಬುದ್ಧಿವಂತಿಕೆ ಹೊಸದಾಗಿ ಸಿದ್ಧವಾದ ಯಾಂತ್ರಿಕ ಮನುಷ್ಯನ ಇಲೆಕ್ಟ್ರಿಕ್ ಮಿದುಳಿನ ಚಟುವಟಿಕೆಯಂತೆ.** ವಿವರಗಳನ್ನು ನೆನಪಿಡುವದು, ಅವುಗಳ ಹೊಂದಿಕೆ ಹೋಲಿಕೆ ಹೊಸ ಹಂಚಿಕೆಗಳನ್ನು ಹೆಣೆಯುವದು-ಇದನ್ನೆಲ್ಲ ಆದಷ್ಟು ಬೇಗ ಸುಟಿಯಾಗಿ ಮಾಡುವದು-ಇವೇ ಬುದ್ಧಿ ಪರೀಕ್ಷೆಗೆ ಎಟಕುವ ಅಂಶಗಳು. ಇಲ್ಲಿಯೂ ತುಸು ಆಳಕ್ಕೆ ಇಣಿಕಿದರೆ ಕಣ್ಣಿಗೆ ಕತ್ತಲೆಯೇ !



ತಾತ್ಪರ್ಯವೆಂದರೆ ಬುದ್ಧಿಮಾಪನೆಯಿಂದ ಸಿದ್ಧವಾದ ಬುದ್ಧಿವಂತಿಕೆಯು ಮಿದುಳಿನ ಒಂದು ಬಗೆಯ ಯಾಂತ್ರಿಕ ಚಟುವಟಿಕೆಯ ಚುರುಕು. ಅಲ್ಲಿ ವಿಶೇಷವಾಗಿ ವಿವರಗಳ ನಿರೀಕ್ಷಣೆ, ಅವುಗಳ ಅವಸರದ ಪರೀಕ್ಷಣೆ, ಸ್ಮರಣಶಕ್ತಿಯ ಕಸರತ್ತು, ಪ್ರಸಂಗಾವಧಾನದ ಗತ್ತು-ಇವುಗಳಿಗೆ ಪ್ರಾಧಾನ್ಯವಿರುತ್ತದೆ. ಅಂಕಿಸಂಖ್ಯೆಗಳ ಗಣಿತ ಗುಂಡಿಯೊತ್ತಿದೊಡನೆ ಮಾಡಿಕೊಡುವ ಯಾಂತ್ರಿಕ ಮಿದುಳಿನಂತೆ ಈ ಬುದ್ಧಿವಂತಿಕೆ ತನಗೆ ಒಪ್ಪಿಸಿದ ವಿವರಗಳ ಮತ್ತು ವಿಷಯಾಂಶಗಳ ಆಚೆಗೆ ಅಥವಾ ಆಳಕ್ಕೆ ಹೋಗುವದಿಲ್ಲ. ತಥ್ಯಗಳ ತತ್ವ, ವಸ್ತುಗಳ ಸತ್ಯ, ವ್ಯಾಪಾರಗಳ ಧರ್ಮ, ಕಾರ್ಯಗಳ ಕಾರಣ,

ಚಟುವಟಿಕೆಗಳ ಚಾಲನೆ, ನಡತೆಗಳ ನಿಯಮ, ಆ ನಿಯ
ಗಳ ನೀತಿ, ಆ ನೀತಿಯ ಮೂಲ್ಯ, ಗತಾನುಗತಿಯ ಹಿಂ
ಪರಮಾರ್ಥ-ಇದೇನೂ ಆ ಬುದ್ಧಿವಂತಿಕೆಗೆ ತೋಚ
ಅದಕ್ಕೆ ಬೇಕು ವಿಶುದ್ಧ ಬುದ್ಧಿ. ತರಬೇತಿ ಹೊಂದಿದ ತ
ಸರಣಿ, ವಿವೇಕ ಬಲವಿದ್ದ ವಿಚಾರಶಕ್ತಿ-ಅದೇ ಪ್ರಜ್ಞ
ಅಥವಾ **Reason** (ರೀಝುನ್).

ಈ ಶುದ್ಧ ಬುದ್ಧಿಯ ಆಹ್ವಾನವನ್ನು ಹಿಂದೊವ
ಜಗತ್ತಿಗೆ ಸಾರಿದ ಧೀರ ಗೌತಮ ಬುದ್ಧ. ಆದರೆ ಬುದ್ಧೋ
ತ್ತರ ಕಾಲದಲ್ಲಿ ಹಿಂದೂ ಧರ್ಮದ ಪುನರುತ್ಥಾನದೊಂದಿ
ನಮ್ಮ ಮೊದಲನೆಯ ಅಂಧಕಾರಯುಗ ಆರಂಭವಾಯಿತು
ನಮ್ಮ ದೇಶದ ವೈಚಾರಿಕ ಇತಿಹಾಸದ ಮಾರ್ಗವೇ ಕುಂಠಿ
ವಾಯಿತು. ಮಾನಸಿಕ ದಾಸ್ಯದ ಬೆನ್ನಿಗೆ ಸಾಮಾಜಿಕ ದಾಸ್ಯ
ನುಗ್ಗಿ ಬಂದಿತು. ಶತಮಾನದಿಂದ ಶತಮಾನಕ್ಕೆ ನೆಲೆ
ಗೊಂಡಿತು. ಇದೀಗ ರಾಜಕೀಯ ಸ್ವಾತಂತ್ರ್ಯದೊಂದಿಗೆ
ಬೌದ್ಧಿಕ ಸ್ವಾತಂತ್ರ್ಯದ ಯುಗ ಆರಂಭವಾಗಬೇಕು. ಆದರೆ
ಸದ್ಯ ನಮ್ಮನ್ನು ಆವರಿಸಿದ ದೈನ್ಯ, ಹತಾಶೆ, ಆರ್ಥಿಕ ದುರ
ವಸ್ಥೆ, ಸಾಮಾಜಿಕ ಅನವಸ್ಥೆ, ರಾಜಕೀಯ ಅವ್ಯವಸ್ಥೆ
ಮತ್ತು ವೈಚಾರಿಕ ಅನಾಸ್ಥೆ-ಇವೆಲ್ಲವುಗಳಿಂದ ಒಂದು
ದಿಗ್ಭ್ರಾಂತ ಪರಿಸ್ಥಿತಿ ಉಂಟಾಗಿದೆ. ಈ ನಡುವೆ ನಮ್ಮ
ಹುರಿಗೊಂಡ ರಾಷ್ಟ್ರೀಯ ಮನೋವೃತ್ತಿಯು ಪಾಶ್ಚಾತ್ಯ
ಪರಾವಲಂಬನದ ಪಾಶಗಳನ್ನೆಲ್ಲ ಕಳಚಿ ಒಗೆಯುವ ಭರದಲ್ಲಿ
ಸ್ವಾಭಿಮಾನದ ನಿರ್ಭರದಲ್ಲಿ ಪ್ರಾಚೀನ ಇತಿಹಾಸದಿಂದ

ಹಾಸಕ್ಕೂ ಆಚೆಯ ಪುರಾಣ-ಪುಣ್ಯಕಥೆಗಳಿಂದ ಸ್ಫೂರ್ತಿ ನ್ನು ಪಡೆದು ಹೊಸದೊಂದು ಬಗೆಯ ಅಂಧಶ್ರದ್ಧೆಯನ್ನು ಟ್ಟಿಸಿಕೊಂಡಿದೆ. ಇದರ ಅನಿಷ್ಟ ಫಲವೆಂದರೆ ನಮ್ಮ ಕ್ಷಿತ ಮೇಧಾವಿಗಳಲ್ಲಿಯೂ ಒಂದು ಕೃತಕ ಭಾವಿಕತೆ, ಪ್ರಮಾಣಿಕವಾದ ಧಾರ್ಮಿಕತೆ, ಹೊಸಮಾದರಿಯ ರ್ಮಠತೆ ತಲೆಯೆತ್ತಿದೆ. ಇದು ಅನುಭಾವವೆಂದು, ್ಯಾತ್ಮವೆಂದು, ಯೋಗವೆಂದು, ಹಿಂದೂ ಸಂಸ್ಕೃತಿಯ ಪುನರು ವನವೆಂದು ಆವಿರ್ಭವಿಸಿದೆ. ಹೊಸ ಪರಿಭಾಷೆಯಲ್ಲಿ ಯ ಪುರಾಣ ಹೇಳಲಾಗುತ್ತದೆ. ಅಂಧಶ್ರದ್ಧೆಗೆ ಆಧುನಿಕ ್ಞೆಯ ಪುಟ ಹಾಕಲಾಗುತ್ತದೆ.

## ನಮ್ಮ "ಲೌಕಿಕ" ರಾಜ್ಯದಲ್ಲಿ ಬುದ್ಧಿಸ್ವಾತಂತ್ರ್ಯ- ಅಂತಃಕರಣ ವಿವೇಕ

ನಮ್ಮ ರಾಜ್ಯಘಟನೆಯ ಮೇರೆಗೆ ಭಾರತ ಸೆಕ್ಯೂಲರ ್ಯ. ಇಲ್ಲಿ ಧಾರ್ಮಿಕತೆಗಿಂತ ಲೌಕಿಕತೆಗೆ ; **ಸ್ವಧರ್ಮ** **ಿನ್ನಯುದ ಹಟಕ್ಕಿಂತ ಸರ್ವಧರ್ಮ ಸಹಿಷ್ಣುತೆಯ** **ಬಲಕ್ಕೆ ಹೆಚ್ಚಿನ ಪ್ರಾಶಸ್ತ್ಯ (ವಿರಬೇಕು !)** ಆದರೆ ನಮ್ಮ ೀಕ ಧುರೀಣರು ಈ "ಧರ್ಮಾತೀತ" ವೃತ್ತಿಯ ವ್ಯಂಗ್ಯ ಂಬನೆ ನಡೆಯಿಸುವದು ಕಂಡುಬರುತ್ತದೆ. ಒಟ್ಟಾರೆ ಾನಿಕ ಭಾರತದಲ್ಲಿಯೂ ಬುದ್ಧಿಗೆ, ವಿಚಾರವಂತಿಕೆಗೆ ್ರಸ ಗ್ರಹಣ ತಪ್ಪಿಲ್ಲ. ಆದರೆ ಇಂಥ ಗ್ರಹಣ ನಮು

ಹೊಸ ಹುಟ್ಟಿನ ಪ್ರಜಾಪ್ರಭುತ್ವಕ್ಕೆ ಬಾಲಗ್ರಹ ಬಡಿದಂ
ಸಾಮಾಜಿಕ ಮತ್ತು ವೈಯಕ್ತಿಕ ಜೀವನದಲ್ಲಿ
ಪ್ರಧಾನತೆಗೆ ಪ್ರಭುತ್ವ ಸ್ಥಾಪಿತವಾದ ಹೊರತು ಪ್ರಜ
ತ್ವಕ್ಕೆ ಯಾವ ಅರ್ಥವೂ ಇಲ್ಲ. ಪ್ರೌಢನಿಗೆ ಮತಾ
ಬಂದ ಈ ರಾಜ್ಯದಲ್ಲಿ ಈ ಅಧಿಕಾರವುಳ್ಳ ಪ್ರತಿಯ
ಮತಕ್ಕೂ ಒಂದು ಪ್ರೌಢತೆ, ಪರಿಪಕ್ವತೆ ಇರದಿದ್ದ
ಅಧಿಕಾರ ಕೋತಿಯ ಕೈಗೆ ಕೊಟ್ಟ ಕೋವಿಯೇ
ಮತಾಧಿಕಾರಕ್ಕೆ ಮತಸ್ವಾತಂತ್ರ್ಯವೇ ಆಧಾರ.
ಬುದ್ಧಿಸ್ವಾತಂತ್ರ್ಯ ಆಧಾರ. ನಮ್ಮ ಮತ ಪ್ರತಿಯ
ಮತಪ್ರಚಾರದ ಗಾಳಿಗೊಡ್ಡಿದ ಸೊಡರಾಗಿ ತತ್ತರಿಸು
ಅದು ಯಾವ ದಾರಿ ಯಾವ ದೂರ ಬೆಳಗಬಹು
ಮತಗಳನ್ನು ತೂಗಿ ನೋಡಲು, ಮೋಹಗಳನ್ನು ತಡೆಯ
ಹಿತಾಹಿತಗಳ ಮರ್ಮವನ್ನು ತಾರತಮ್ಯವಾಗಿ ತಿಳಿಯ
ಕಂಡದ್ದೇ ಕಂಡಷ್ಟೇ ಸತ್ಯವೆಂದು ಭಾವಿಸದೆ ಸತ್ಯ
ಕಂಡುಕೊಳ್ಳಲು ಎಂದಿಗಿಂತಲೂ ಹೆಚ್ಚಾಗಿ ಇಂದು
ಸ್ವತಂತ್ರ ಬುದ್ಧಿಯನ್ನು ಪಳಗಿಸಿಕೊಳ್ಳಬೇಕಾಗಿದೆ.
ದಾಸನೇ ಅಂದಂತೆ "ಸತಾಂ ಹಿ ಸಂದೇಹ ಪದ
ವಸ್ತುಷು । ಪ್ರಮಾಣಂ ಅಂತಃಕರಣ ಪ್ರವೃತ್ತಯ
ಇದಕ್ಕೂ ಖಂಡಿತವಾಗಿ ಆ ಕವಿಯು ಮೂರ್ಖನ ಸಾ
ಭೌಮ ಲಕ್ಷಣವನ್ನೂ ಸಾರಿದ್ದಾನೆ. "ಮೂಢಃ ಪರಪ್ರತ್ಯ
ನೇಯ ಬುದ್ಧಿಃ"

ಸಜ್ಜನಿಕೆಗೆ ಅಂತಃಕರಣ ಅವಶ್ಯ. ಅದನ್ನೆ ನ

ಸದಸದ್ವಿವೇಕ ಇಲ್ಲವೆ ಮನೋದೇವತೆ ಎನ್ನುತ್ತೇವೆ. ಆದರೆ ನಮ್ಮಲ್ಲಿ ಈ ವಿವೇಕ ಎಷ್ಟು ಸಲ ಎಷ್ಟು ಮಟ್ಟಿಗೆ ಸತ್ಯವಾಗಿ, ಸರಿಯಾಗಿ, ಶುದ್ಧವಾಗಿ ಕೆಲಸ ಮಾಡುತ್ತದೆ ? ಮುಕ್ಕಾಲು ಪಾಲು ಜನರಲ್ಲಿ ಈ ಅಂತಃಕರಣವೆಂಬ ವಿವೇಕಶಕ್ತಿ ಮೂಲತಃ ಚಿಕ್ಕಂದಿನಿಂದಲೂ ಗುರುಹಿರಿಯರಿಂದ ಕೇಳಿ ಕಲಿತು ಸಂಸ್ಕಾರಗೊಂಡು ಬಂದ, ಅರಿಯದೆ-ಅಂಟಿ ಸ್ಥಿರವಾಗಿ ಲೇಪವಾದ ಸಮ್ಮಿಶ್ರ ಭಾವನೆಗಳ-ಕುರುಡು ನಂಬಿಗೆಗಳ-ವಿಚಾರಕ್ಕೆ ನಿಲ್ಲದ ವಿಧಿನಿಷೇಧಗಳ-ಹುತ್ತವಾಗಿರುತ್ತದೆ. ಪಾಪ ಪುಣ್ಯ ವಿವೇಕ ಈ ಅಂತಃಕರಣದ ಕಾರ್ಯ. ಆದರೆ ಈ ವಿವೇಕ ವಿಚಾರಕ್ಕೆ ನಿಲುಕದ ಒಂದು ತೀವ್ರಭಾವನೆಯಾಗಿದೆ, ಪೂರ್ವಗ್ರಹಗಳ ವ್ಯೂಹವಾಗಿದೆ. ಪರಂಪರೆಯಿಂದ ಕೇಳಿ ನಂಬಿ ಹೆದರಿ ಹಂಬಲಿಸಿ ಮನವುಂಡುಕೊಂಡು ಬಂದ ವಿಶಿಷ್ಟ ವಿಕಾರಗಳ ಚಟವಾಗಿದೆ. ಅದಕ್ಕೆ ಸಂಪ್ರದಾಯ ಶರಣತೆಯ ಮನೋ ಜಾಡ್ಯ, ಸಾಮಾಜಿಕ ಅಥವಾ ಜಾತೀಯ ಅಹಂಕಾರದ ಬಲಾತ್ಕಾರ, ಅಜ್ಞಾನದಲ್ಲಿಯೇ ಸುರಕ್ಷಿತತೆಯನ್ನು ಕಾಣುತ್ತಬಂದ ಸ್ವಯಂಪ್ರತಿಷ್ಠೆಯ ಪುರಸ್ಕಾರ. "ಹತ್ತರ ಕೂಡ ಹನ್ನೊಂದು" ಆಗಬೇಕೆಂಬ,—ಬಹು ಜನಪ್ರಿಯತೆಯ ಕವಚ ಒಡೆದು ಏಕಾಕಿಯಾಗಿ ಬೇರೆ ವಿಚಾರ ಮಾಡಲು ಆರದ ಅರಿಯದ,-"ಹೃದಯ ದೌರ್ಬಲ್ಯ"-ಇವೆಲ್ಲವೂ ಪೋಷಕವಾಗಿ ಕಲ್ಲಿಗೆ ದೇವತ್ವವನ್ನು ಕೊಡುವಂತೆ ನಮ್ಮ ಆ ಬಾಲ್ಯದ ಭಾವನಾ ಸಂಸ್ಕಾರಕ್ಕೆ ಆ ಮನೋದೇವತೆಯ ಕಳೆ ಏರುತ್ತದೆ. ಇಂಥ ಮನೋದೇವತೆಯ

ಮುಡಿಪ್ರಸಾದ ಅಂತಃಕರಣದ "ಒಳದನಿ" ಸರಿಯ
ಯನ್ನು ಸತ್ಯದ ಗುರಿಯನ್ನು, ಹಿತದ ಮಾದರಿಯ
ತೋರಿಸೀತು ? ಅದು ಹಲವೊಮ್ಮೆ ಪ್ರಿಯವನ್ನೆ
ಭಯವನ್ನೆ ಸತ್ಯವನ್ನಾಗಿ, ಸ್ವಾರ್ಥವನ್ನೆ
ವನ್ನಾಗಿ, ದೌರ್ಬಲ್ಯವನ್ನೆ ಸದ್ಗುಣವನ್ನಾಗಿ,
ಯನ್ನೆ ಕರ್ತವ್ಯವನ್ನಾಗಿ, ದೋಷವನ್ನೆ ಲಕ್ಷ
ಮತ್ತು ಇಚ್ಛೆಯನ್ನೆ ತತ್ವವನ್ನಾಗಿ ಅಲ್ಲ ಈಶ ಸಂಕೆ
ಕಲ್ಪಿಸುತ್ತದೆ!

ಹೀಗೆ ಸ್ಥಿರವಾಗಿ ಬಂದ ಬಾಲಿಶಭಾವನೆಗ
ವಾದ ಅಂತಃಕರಣವು ವ್ಯಕ್ತಿ ವ್ಯಕ್ತಿಗೂ ಜಾತಿ
ಜನಾಂಗ ಜನಾಂಗಕ್ಕೂ ದೇಶ ದೇಶಕ್ಕೂ ಕಾಲ
ಬೇರೆಯಾಗುತ್ತದೆ. "ತೇನಾಪಿ ದೇವೇನ ಹೃದಿಸ್ಥಿತೇನ
ನಿಯುಕ್ತೋಽಸ್ಮಿ ತಥಾ ಕರೋಮಿ॥" ಎಂದು ದ
ಧನನೂ ಹೇಳುವವನೇ! ಆದರೆ ಅವನ ಹೃದಿಸ್ಥಿ
ಬೇರೆ, ಧರ್ಮರಾಜನ ಹೃದಯಸ್ಥ ದೇವನು ಬೇರೆ.
ಅಂತಃಕರಣ ರಾವಣನ ಅಂತಃಕರಣ ಒಂದೇ ಹೇಗಾ
ಬೇಡನ ಮನೋದೇವತೆ ಜಾಡನ ಮನೋದೇವತೆ
ಇರುವದು ಶಕ್ಯವಿಲ್ಲ. ಪಾಪ ಪುಣ್ಯಗಳ ಭಾವನೆ ಅ
ಪಾಕಗೊಂಡ ಅಂತಃಕರಣದ ಕಲ್ಪನೆ, ಪ್ರಾದೇಶಿಕ,
ಸಾಂಸ್ಕೃತಿಕವಾದದ್ದು. ಇಂಥ ನಿಶ್ಚಿತವಲ್ಲದ ನಿಶ್ಚಲ
ಅಂತಃಕರಣ ನೀತಿಗೆ ಧರ್ಮಕ್ಕೆ ನೆಲೆ ಹೇಗಾದೀತು ?

## ೧೦. ಶುದ್ಧ ಬುದ್ಧಿಯೇ ಒರೆಗಲ್ಲು

ಇಲ್ಲಿ ಬಂತು ವಿಚಾರವಾದಕ್ಕೆ ಇನ್ನೊಂದು ಆಹ್ವಾನ. ಶುದ್ಧ ಬುದ್ಧಿಯ ಒರೆಗಲ್ಲು ಅಂತಃಕರಣಕ್ಕೂ ಬೇಕು. ನಮ್ಮ ಮಹಾತ್ಮರೇ ಎಷ್ಟು ಸಲ ತಮ್ಮ "ಅಂತರ್ಧ್ವನಿ"ಯನ್ನು ನಂಬಿ ಅನ್ನಸತ್ಯಾಗ್ರಹ ಹೂಡಿಲ್ಲ; ಮತ್ತು ಕೊನೆಗೆ ಅದೊಂದು "ಹಿಮಾಲಯದಷ್ಟು ದೊಡ್ಡ ಪ್ರಮಾದ"ವೆಂದು ಒಪ್ಪಿಕೊಂಡಿಲ್ಲ! (ಇನ್ನು ಹೀಗೆ ತಪ್ಪು ಒಪ್ಪಿಕೊಂಡದ್ದೆ ಅವರ ಮಾಹಾತ್ಮ್ಯದ ಮಹೋನ್ನತಿಗೆ ಕಾರಣವಾಯಿತು; ಆ ಮಾತು ಬೇರೆ!) ಮಹಾತ್ಮರ ಅಂತಃಕರಣವೇ ತಪ್ಪು ತೀರ್ಪು ಕೊಡುತ್ತಿತ್ತು; ಮಿಕ್ಕವರ ಪಾಡೇನು? ಅಂದ ಮೇಲೆ ಅಂತಃಕರಣದ ಶುದ್ಧತೆ, ಅದರ ಪ್ರೇರಣೆಯ ಶುಭತ್ವ ಕೊನೆಗೂ ಶುದ್ಧ ಬುದ್ಧಿಯೇ ನಿರ್ಣಯಿಸಬೇಕು. ಹೀಗೆ ವಿಚಾರವಾದದಿಂದ ಬುದ್ಧಿಯ ಪ್ರಾಮಾಣ್ಯದಿಂದ ನೀತಿಯನ್ನೂ ಅಂತಃಕರಣವನ್ನೂ ಬೇರೆ ಮಾಡುವದು ಶಕ್ಯವಿಲ್ಲ, ಇಷ್ಟವೂ ಅಲ್ಲ. ಬುದ್ಧಿಯ ತಳಹದಿಯ ಮೇಲೆ ಸಾವು ಬದುಕಿನ ಬೆಲೆಗಳನ್ನು ತೂಗಿ ತೀರ್ಮಾನಿಸುತ್ತೇವೆ. ಹೀಗೆ ಅಂತಃಕರಣ ನಿಜವಾಗಿಯೂ ಒಂದು ಉಗ್ರದೇವತೆ. ಅದು ಸಂಪ್ರದಾಯಕ್ಕೆ ಒಗ್ಗದ ಶಕ್ತಿ. ಪ್ರಪಂಚವೆಲ್ಲ ಅಹುದೆಂದು ಹಟಹಿಡಿದು ಕೂಗುವಾಗಲೂ "ಅಲ್ಲ"ವೆನ್ನುವ ದಿಟ್ಟತನ ಅಂತಃಕರಣಕ್ಕೆ ಇರಬೇಕು. ಈ ದಿಟ್ಟತನಕ್ಕೆ ಈ ಧೀರತನಕ್ಕೆ ಧೀ ಶಕ್ತಿಯೇ ಆಧಾರ. ವೈದಿಕ ಆರ್ಯರು "ಧೀರ" ಶಬ್ದವನ್ನು 'ಜಾಣ'ವೆಂಬ ಅರ್ಥದಲ್ಲಿಯೂ ಬಳಸುತ್ತಿದ್ದುದರ ಸ್ವಾರಸ್ಯವೇ ಇದು.

ಯಾವ ಮಟ್ಟಿಗೆ ಒಬ್ಬಾತ ಬಹು ಜನಸಮು
ಅನುಸರಿಸಿ ಬಂದ ಸಂಪ್ರದಾಯದ ಸೆಳವಿಗೆ ಮೈ
ತಲೆತಗ್ಗಿಸುವನೋ ಆ ಮಟ್ಟಿಗೆ ಆತನಿಗೆ ಅಂತಃಕ
ವಿವೇಕ ಪ್ರಜ್ಞೆ ಕಡಮೆಯೆನ್ನಲು ಅಡ್ಡಿ ಇಲ್ಲ. ಇದ
ಭಾರತೀಯ ತತ್ವಜ್ಞರ ಇತಿಹಾಸವೇ ಸಾಕ್ಷಿ. ನಮ್ಮ
ನಿಂದಲೂ ವಿಶೇಷತಃ ಹಿಂದೂ ಧರ್ಮದ ಪುನರ
ಪ್ರತಿಕ್ರಾಂತಿಯ ಕಾಲದಿಂದ—ಆಚಾರವೇ ವಿಚಾ
ಆಳಿತು-ತುಳಿಯಿತು. ನಮ್ಮ ದಾರ್ಶನಿಕರು ಶಾ
ತಮ್ಮ ಸ್ವತಂತ್ರ ಪ್ರತಿಭೆಯ ವಿಚಾರವಿಲಾಸವನ್ನೆಲ್ಲ ಕ
ಸನಾತನ ಸಂಪ್ರದಾಯದ ಹಳೆಯ ಎರಕಗಳಲ್ಲಿಯೆ
ಬಿಟ್ಟರು, ಹೆಪ್ಪುಗಟ್ಟಲು ಬಿಟ್ಟರು. ನಮ್ಮಲ್ಲಿ ಬೇ
ಮತ ಸಂಪ್ರದಾಯಗಳನ್ನು ಸ್ಥಾಪಿಸಿದ ಆಚಾರ್ಯರು
ಸ್ವತಂತ್ರ ಮತ ಪ್ರತಿಪಾದನೆಯ ಗಂಟುಗಳನ್ನು ಕ
ತೂಗ ಹಾಕಿದ್ದು ಎಲ್ಲರೂ ಅದೇ "ಪ್ರಸ್ಥಾನ ತ್ರಯಿ"ಗೆ.
ಪಯಣಕ್ಕೂ ಪ್ರಸ್ಥಾನ ಒಂದೇ!—ಉಪನಿಷತ್ತು,
ಸೂತ್ರ, ಭಗವದ್ಗೀತೆ, ನಮ್ಮ ಭಾಸ್ಕರಾಚಾರ್ಯರ ಭಾ
ಚಾರ್ಯತ್ವ ಅವರ ವೇಧ ಶಾಲೆಯಲ್ಲಿಯೇ! ಹೊ
ರೆಂದರೆ ಅವರೂ ಗ್ರಹಣ ಕಾಲದಲ್ಲಿ ಗ್ರಹದೋಷ ನಿ
ಗಾಗಿ ಗಂಗಾಸ್ನಾನ ತಿಲ ತಂಡುಲದಾನ, ಮಿಕ್ಕ ಜನ ಜ
ಯಷ್ಟೇ ಭಯ ಭಕ್ತಿಯಿಂದ ಮಾಡುವವರು! ಏಕ
"ಯದ್ಯಪಿ ಸಿದ್ಧಂ ಲೋಕ ವಿರುದ್ಧಂ। ನಾಚರಣೀ
ನಾಕರಣೀಯಂ॥" ಅದೇಕೆ? ಅಜ್ಞರ ಬುದ್ಧಿ ಭೇದ
ಬಾರದು! "ನ ಬುದ್ಧಿ ಭೇದಂ ಜನಯೇತ್" "ಪ್ರ

ಸೌಮ್ಯ !" ಬುದ್ಧಿ ಭೇದ ಮಾಡಬಾರದೆಂದು ಭಗವದ್ಗೀತೆಯೇ ಹೇಳುತ್ತದೆ. "ಭಗವದ್ಗೀತೆಯ ಮಾತಿಗೆ ಅಷ್ಟೇಕೆ ಮನ್ನಣೆ?" "ಅದು ಭಗವಂತನ ಗೀತೆ"; "ಭಗವಂತನಾರು?" "ಶ್ರೀಕೃಷ್ಣ ಪರಮಾತ್ಮ"; "ಶ್ರೀಕೃಷ್ಣ ಪರಮಾತ್ಮನು ಹೇಗೆ?" "ಗೀತೆಯೇ ಹೇಳಿದೆ ಪರಮಾತ್ಮ ಅವತಾರ ತಾಳುತ್ತಾನೆಂದು." "ಅವತಾರ ವಾದ ಏಕೆ ನಂಬಬೇಕು ?" "ಎಂಥ ಮಾತು ! ಅವತಾರವಾದ ಗೀತೆಯಲ್ಲಿಯೇ ಇದೆ. ಶ್ರೀಕೃಷ್ಣನೇ ಹೇಳಿದ್ದಾನೆ." "ಆದರೆ ಶ್ರೀಕೃಷ್ಣ ಹೇಳಿದ ಮಾತ್ರಕ್ಕೆ ಏಕೆ ನಂಬಬೇಕು ?" "ಅಯ್ಯೋ ಮಂಕೆ. ಶ್ರೀಕೃಷ್ಣ ಪರಮಾತ್ಮನ ಅವತಾರ !" — ಹೇಗಿದೆ ಈ ವಿಚಾರ ಸರಣಿ ? ಇದು ತನ್ನ ಹೆಗಲನ್ನೇ ತಾನು ಏರಲು ಹೆಣಗುವ ಕಸರತ್ತು ! ಆದರೆ ಇದನ್ನೆ ನಮ್ಮ ಪ್ರಾಜ್ಞರು ಪ್ರಾಚೀನರು ಅನುಸರಿಸಿ ಬಂದರು ! ಇಂಥ ಪ್ರವಾಹ ಪತಿತ — ಸೆಳವಿನೊಂದಿಗೆ ಸಾಗುವ — ಪ್ರವೃತ್ತಿಯೇ ಶತಮಾನಗಳಿಂದಲೂ ಪ್ರಜ್ಞೆಯನ್ನು ಮೆಟ್ಟಿನಿಂತ ಸಮಾಜದಲ್ಲಿ ಅಂತಃಕರಣದ ಸ್ವಾತಂತ್ರ್ಯ, ಅದರಿಂದ ಹೊಮ್ಮುವ ಮನೋಬಲ, ಅದು ಪ್ರಕಟಿಸುವ ನೈತಿಕ ಧೈರ್ಯ, ಸತ್ಯವನ್ನೆ ಭಜಿಸುವ ನಿಷ್ಠುರ ನಿಷ್ಠೆ, ಅದರ ಫಲವಾದ ವೈಚಾರಿಕ ಕ್ರಾಂತಿ ಎಲ್ಲಿಂದ ಬರಬೇಕು ?

ಮಾನವ ಮಾನವನಾಗಿ ನಿಲ್ಲಬೇಕಾದರೆ ಅವನಿಗೆ ಅಂತಃಕರಣವಿರಲೇಬೇಕು. ಅದು ಪ್ರಾದೇಶಿಕ, ಪ್ರಾಸಂಗಿಕವಾಗದೆ ಮಾನವ್ಯದಷ್ಟೇ ಸಾರ್ವಭೌಮವಾಗಿರಬೇಕು.

ಹಾಗೆ ಆಗಲು ಅವನಿಗೆ ಬುದ್ಧಿ ಸ್ವಾತಂತ್ರ್ಯಬೇಕು.
ಪ್ರಾಮಾಣ್ಯಬೇಕು. ಅದೂ ವ್ಯಾವಹಾರಿಕ ವಿಸಿ
ಬುದ್ಧಿಯಲ್ಲ. ಶುದ್ಧ ವೈಚಾರಿಕ ಬುದ್ಧಿಯದು.
ಹಾರಿಕ ಬುದ್ಧಿ ವಿಚಾರಗಳನ್ನು ಉಪಯೋಗಿಸಿ
ವನ್ನು ಅಳವಡಿಸಿಕೊಳ್ಳುತ್ತದೆ. ಆದರೆ ಶುದ್ಧ
ಪ್ರಪಂಚವನ್ನು ವಿಚಾರದಿಂದಲೇ ನೇರವಾಗಿ ಗ್ರಹಿ
ವ್ಯವಹಾರದ ಬುದ್ಧಿ ಯಶಸ್ಸು ಪಡೆಯಲು
ದೊಂದಿಗೆ ವ್ಯವಹರಿಸುವ ಒಂದು ಉಪಕರಣ.
ಬುದ್ಧಿ ಸತ್ಯವನ್ನು ನಿಲುಕುವ ಒಂದು ಉಪಕರಣ.
ಹಾರ ಬುದ್ಧಿಯನ್ನು ಮನುಷ್ಯನು ಕೆಲಮಟ್ಟಿಗೆ ಕೆಳ
ಪಶುಗಳೊಂದಿಗೂ ಹಂಚಿಕೊಂಡಿರುತ್ತಾನೆ. ಆದರೆ
ಬುದ್ಧಿ ಮನುಷ್ಯನದೇ ಆದ ಗುಣ ವಿಶೇಷ. ಆದರೆ ಅ
ಇದಕ್ಕೂ ಜಾತಿ ಭೇದವಿಲ್ಲ; ಕೇವಲ ತರಗತಿಭೇದ.
ಬುದ್ಧಿಗೆ ವ್ಯವಸಾಯ, ಅಭ್ಯಾಸ, ಕೃಷಿ ಅಗತ್ಯ.
ರಿಂದಲೇ ಆ ಬುದ್ಧಿಯ ಪರಿಪಾಕ ಮತ್ತು ಪ್ರೌಢಿಮೆ.
ಅವಿಭಾಜ್ಯ. ಅಂದರೆ ಶುದ್ಧ ಬುದ್ಧಿಯ ಶುದ್ಧ
ಶಕ್ತಿಯ ಪ್ರೌಢಿಮೆಯನ್ನು ಪಡೆದ ಮೆದುಳಿಗೆ
ಕಣ್ಣಿಗೆ ಜ್ಞಾನದ ಮತ್ತು ಅನುಭವದ ಎಲ್ಲ ಕ್ಷೇತ್ರಗಳಲ್ಲಿ
ತಳಸಾಟುವ ಒಳನೋಟ ಸತ್ಯ. "ನಾಸ್ತಿ ಕಶ್ಚಿತ್ ಅವಿಷ
ನಾಮ ಧೀಮತಾಂ" ಎಂಬುದು ಈ ಅರ್ಥದಲ್ಲಿ
ಜ್ಞಾನದ ಒಂದು ಕ್ಷೇತ್ರದಲ್ಲಿ ಬುದ್ಧಿಯು ಭ್ರಮೆ
ಮಬ್ಬಿನಲ್ಲಿ ಸುಳಿದಾಡುತ್ತಿದ್ದರೆ ಅದರಿಂದ ಇತರ
ಗಳಲ್ಲಿಯೂ ಅದರ ಗತಿಯು ಕುಂಠಿತವಾಗುತ್ತದೆ

ಭ್ರಮೆ, ಈ ಮಬ್ಬು ಒಂದು ಪರೆಯಂತೆ. ಅದನ್ನು ಕಳಚುವದೆಂದರೆ ಪ್ರಪಂಚವನ್ನೂ, ಜೀವನವನ್ನೂ, ಜಗತ್ತನ್ನೂ ವಾಸ್ತವವಾಗಿ ತಟಸ್ಥವಾಗಿ ನೋಡುವ ಹದ ಕಲಿತುಕೊಳ್ಳುವದು. ವ್ಯಕ್ತಿಗಳನ್ನೂ, ಸಮಾಜವನ್ನೂ, ನಿಸರ್ಗವನ್ನೂ ಮತ್ತು ತನ್ನನ್ನು ಪ್ರತ್ಯೇಕವಾಗಿ ತಟಸ್ಥವಾಗಿ ನಿರೀಕ್ಷಿಸುವ ಮತ್ತು ಸಮೀಕ್ಷಿಸುವ ವ್ಯವಸಾಯ ನಡೆದಷ್ಟು ಬುದ್ಧಿ ಶುದ್ಧವಾಗುತ್ತದೆ. ವ್ಯಾವಹಾರಿಕ ಪಾತಳಿಯಿಂದ ಮೇಲೇರಿ ಅದು ನಿಶ್ಚಯಾತ್ಮಕವಾಗುತ್ತದೆ. ಸಂಕಲ್ಪ-ವಿಕಲ್ಪಗಳಿಂದ ಹೊಯ್ದಾಡದೆ ನಿರ್ಣಯಕ್ಕೆ ನಿಲುಕಲು ತಕ್ಕುದಾಗುತ್ತದೆ. ಇಂಥ ಬುದ್ಧಿಯ ಬೆಳಕು ಸಮಗ್ರ ಬಾಳನ್ನೇ ವ್ಯಾಪಿಸುತ್ತದೆ. ಇದೇ ದಿವ್ಯ ದೃಷ್ಟಿ. ಜೀವನದ ಯಾವ ಕ್ಷೇತ್ರದಲ್ಲಿಯೂ ಎಂಥ ಸಮಸ್ಯೆಯನ್ನೂ ಈ ದೃಷ್ಟಿ ಸಮಗ್ರವಾಗಿ, ಸಮಂಜಸವಾಗಿ, ಸಂದರ್ಭವರಿತು ಅಳೆದು ತಿಳಿದು ನೋಡಬಲ್ಲದು. ಈ ಸ್ವರೂಪದಲ್ಲಿ ಶುದ್ಧ ಬುದ್ಧಿ ಪ್ರೇಮವನ್ನೇ ಹೋಲುತ್ತದೆ. ಪ್ರೇಮ ಭಾವನೆ ಹೇಗೆ ಏಕದೇಶೀಯವಾಗಲಾರದೋ, ಒಂದು ನಿಟ್ಟಿನಲ್ಲಿ ಒಂದು ನಿಮಿತ್ತವಾಗಿ ಅರಳಿದ ಪ್ರೇಮದ ಮಾರ್ದವವೂ ಆರ್ಜವವೂ ಇಡಿಯ ಬಾಳಿಗೆ ಕಂಪನ್ನೂ ಕಳೆಯನ್ನೂ ಕೊಡಬಲ್ಲದೋ ಅದೇ ರೀತಿ ಶುದ್ಧ ಬುದ್ಧಿಯು ಪರಿಪಾಕದ ಪರಿಣಾಮವಾಗಿದೆ.

ಮೇಲಿನ ವಿವೇಚನೆಯಿಂದ ನಾವು ತಿಳಿದದ್ದೇನು ? ಶುದ್ಧ ವೈಚಾರಿಕ ಬುದ್ಧಿಯೊಂದೇ ಮನುಷ್ಯತ್ವದ ಸಾಮರ್ಥ್ಯ

ಮತ್ತು ಅದರ ಕೃಷಿಯಿಂದಲೇ ಮಾನವ್ಯದ ಸಾರ್ಥಕ್ಯ
ಅದು ನಿಜವಾದ ನೀತಿಮತ್ತೆಗೂ ಕೊನೆಯ ನಿಕಷ. ಅದ
ಮರ್ಮಸ್ಪರ್ಶಿ, ಸರ್ವಸ್ಪರ್ಶಿ, ಪಾರದರ್ಶಿ, ಸಮದರ್ಶಿ.

## ೧೧. ಭೌತಿಕತೆಯಿಂದ ಬೌದ್ಧಿಕತೆಗೆ

ಮನುಷ್ಯನ ಬುದ್ಧಿಗೆ ವಿಚಾರಶಕ್ತಿ ಮತ್ತು ಕಲ್ಪನ
ಶಕ್ತಿಗಳಿವೆಯೆಂಬುದು ನಿಮಗೆ ಗೊತ್ತು. ಇವುಗಳಿಂದಾ
ಮನುಷ್ಯ ತನ್ನನ್ನು ಪ್ರಪಂಚದಿಂದ ಪರಿಸರದಿಂದ ಪ್ರತ್ಯೇ
ವಾಗಿ ಅರಿತು ಗುರುತಿಸಿಕೊಳ್ಳುತ್ತಾನೆ. ಈ ಅರಿವು ಅಥವ
ಸ್ವರೂಪಜ್ಞಾನ ಎರಡು ವಿಧ. ಒಂದು, ತನ್ನನ
ತಾನಾಗಿ ತಿಳಿಯುವದು. ಇನ್ನೊಂದು, ಪ್ರಪಂಚದಿಂ
ಬೇರೆಯಾಗಿ ಬಿಡಿಯಾಗಿ ತಿಳಿಯುವದು. ಮನುಷ್ಯಶಿಶ
ಗರ್ಭದಿಂದ ಹೊರಗೆ, ತಾಯ ಮಡಿಲಿನಿಂದ ತೊಡೆಗೆ, ತೊ
ಯಿಂದ ನೆಲಕ್ಕೆ ಬಿದ್ದಲ್ಲಿಂದ ಉರುಳಿ, ಹೊಸೆದು, ಅಂ
ಗಾಲಿಕ್ಕಿ, ಎದ್ದು, ನಡೆದಾಡಿ ಹೊರ ಜಗತ್ತಿನಿಂದ, ಜಗ
ನಲ್ಲಿ, ಪ್ರತ್ಯೇಕವಾಗಿ ತನ್ನ ಶರೀರವನ್ನು ಸಮಷ್ಟಿಯಿಂ
ಬೇರ್ಪಡಿಸಿ ನೇರ್ಪಡಿಸಿಕೊಳ್ಳುತ್ತದೆ. ಶಾರೀರಿಕವಾದ ಈ
ಕ್ರಮವನ್ನು ಅವನ ಮಾನಸಿಕ ವಿಕಾಸದ ಕ್ರಮವು ಹೋಲ
ತ್ತದೆ. ತನ್ನ ಅಸ್ತಿತ್ವವನ್ನು ಬೇರ್ಪಡಿಸುವಂತೆ ಮನುಷ
ಕ್ರಮೇಣ ತನ್ನ ಜ್ಞಪ್ತಿತ್ವವನ್ನೂ ಜಗತ್ತಿನಿಂದ ಬೇರ್ಪಡಿಸ
ತ್ತಾನೆ. ಹುಟ್ಟಿದ ಶಿಶುವಿಗೆ ಸುತ್ತಲೆಲ್ಲ ಗಾಢವಾದ ಗೂ
ವಾದ ಸಮಸ್ಯೆಗಳ ನಿಬಿಡಾರಣ್ಯ. ಎಲ್ಲವೂ ಅಗವ

ಅಗಾಧ. ಆದರೆ ಅದನ್ನೆಲ್ಲ ನಿಧಾನವಾಗಿ ಅರಿತುಕೊಂಡು ಇತ್ಯರ್ಥಗೊಳಿಸಿದ ಹೊರತು ಮನುಷ್ಯನಿಗೆ ಸಮಾಧಾನವಿಲ್ಲ. ಈ ಇತ್ಯರ್ಥ ಮಾಡಿಕೊಳ್ಳಲು ಮನುಷ್ಯನ ಬುದ್ಧಿ ವಸ್ತು ವಸ್ತುವನ್ನೂ ಒಂದು ತಕ್ಕುದಾದ ಸನ್ನಿವೇಶದಲ್ಲಿ ಕಂಡು ಅವುಗಳ ಸಂಬಂಧಗಳನ್ನೂ ಕಂಡು ತನ್ನ ಪ್ರಜ್ಞೆಯ ತೆಕ್ಕೆಯಲ್ಲಿ ಅವನ್ನೆಲ್ಲ ತಂದುಕೊಳ್ಳಲು ಯತ್ನಿಸುತ್ತಾನೆ. ಇಲ್ಲಿ ಒಂದು ಸಂಗತಿಯನ್ನು ಮನಗಾಣಬೇಕು. ಕಾಣುವದು ಬೇರೆ, ಮನಗಾಣುವದು ಬೇರೆ. ಪ್ರಾಣಿಯು ಅನ್ನವನ್ನು ಪಾಚಕರಸಗಳಿಂದ ಸಂಸ್ಕಾರಗೊಳಿಸಿಯೇ ಅರಗಿಸಿಕೊಳ್ಳಬಲ್ಲದು. ವನಸ್ಪತಿಯು ಗೊಬ್ಬರ ಮಣ್ಣುಗಳನ್ನು ಒಂದು ರಾಸಾಯನಿಕ ಮಿಶ್ರಣವಾಗಿಸಿಯೇ ತನ್ನ ಸತ್ವವಾಗಿ ಹೀರಿಕೊಳ್ಳಬಲ್ಲದು. ಅದೇ ರೀತಿ ಮನಸ್ಸು ಹೊರ ಜಗತ್ತನ್ನೂ ವಾಸ್ತಾವತೆಯನ್ನೂ ವಸ್ತುವಾಗಿಯೇ ಇದ್ದಕ್ಕೆ ಇದ್ದಂತೆಯೇ ಗ್ರಹಿಸಲಾರದು. ಅದನ್ನು ಕಲ್ಪನೆಯಾಗಿ ಮಾಡಿಯೇ ತನ್ನ ವಿಚಾರ ಪ್ರಪಂಚದಲ್ಲಿ ಅಳವಡಿಸಿಕೊಳ್ಳಬಲ್ಲದು. ಹೀಗೆ ಬೆಳೆಯುವ ಮನಸ್ಸು ಬಾಹ್ಯ ಜಗತ್ತನ್ನು ತನ್ನ ಒಳಗಣ್ಣಿನ ಮುಂದೆ ಒಂದು ಪ್ರತಿಮಾ ಶಾಲೆಯಾಗಿ ಚಿತ್ರಶಾಲೆಯಾಗಿ ಮೊದಲು ಕಾಣುತ್ತದೆ; ಕೊನೆಗೂ ಕಾಣುತ್ತದೆ. ಆದರೆ ಈ ಪ್ರತಿಮೆಗಳೂ ಚಿತ್ರಗಳೂ ಕ್ರಮೇಣ ಅನುಭವ-ಪರಿಜ್ಞಾನ ಬೆಳೆದಂತೆ, ಜಗತ್ತಿನ ಭೌತಿಕ, ಲೌಕಿಕ, ವಾಸ್ತವ ಸತ್ಯದ ಹೆಚ್ಚು ಹೆಚ್ಚು ಮಗ್ಗಲುಗಳು ಕಂಡುಬಂದಂತೆ, ವಾಸ್ತವತೆಗೆ ಹೆಚ್ಚು ಹೆಚ್ಚು ಹತ್ತಿರವಾಗಿ ಹೋಲುತ್ತವೆ, ಹೊಂದಿಕೊಳ್ಳುತ್ತವೆ. ಹೀಗೆ ಬುದ್ಧಿಯೂ ವಿಚಾರ ಪ್ರಪಂಚ

ದಲ್ಲಿ ಕಂಡದ್ದು ಸತ್ಯ. ಅದು ಬಾಹ್ಯ ಜಗತ್ತಿನ ಕಲ್ಪ
ಪ್ರತಿಬಿಂಬ. ಸಮ್ಯಕ್‌ಜ್ಞಾನ ಸಂಪೂರ್ಣ ಜ್ಞಾನವಾದ
ಈ ಕಲ್ಪನಾ ತಥ್ಯ, ವೈಚಾರಿಕ ಸತ್ಯ, ವಾಸ್ತವ ಜಗತ್ತಿಗೆ ತದ
ಪವಾಗಿ ಯಥಾತಥ್ಯವಾಗಿ ಹೋಲುತ್ತದೆ, ಹೊಂದಿಕೊ
ತ್ತದೆ.

ಈ ರೀತಿ ಭೌತಿಕತೆ ಮತ್ತು ಬೌದ್ಧಿಕತೆ ಇವುಗ
ನಡುವಿನ ಸಮಗ್ರವಾದ, ಸರ್ವಸಂಗ್ರಾಹಕವಾ
ಹೋಲಿಕೆ-ಹೊಂದಿಕೆಗಳ ಮನೋವ್ಯಾಪಾರವೇ ವಿಚಾ
ಸರಣಿ. ಈ ಸರಣಿ ಭ್ರಮೆಯಿಂದಲೂ ಆರಂಭವಾ
ಬಹುದು. ಆದಿ ಮನುಷ್ಯ ಜಗತ್ತಿನ ವಿವಿಧ ವಿಚಿತ್ರ ವ್ಯಾಪ
ರಗಳ ಅರ್ಥಮಾಡಿಕೊಳ್ಳಲು ಆಗದೆ ಅವುಗಳ ಹಿಂದೆ
ಒಂದೊಂದು ಶಕ್ತಿಯನ್ನು ಕಲ್ಪಿಸಿದ — ಅಂತೂ ಒಂ
ಕಲ್ಪನೆಯ ಮುಖಾಂತರ ವಾಸ್ತವತೆಯನ್ನು ತನಗೆ ತೃ
ಯಾಗುವಂತೆ ಆತ ಇತ್ಯರ್ಥ ಮಾಡಿಕೊಂಡ. ಕವಿ ರವೀಂದ್ರ
" ಚಿತ್ರಾಂಗದೆ " ಅರ್ಜುನನನ್ನು ವಶೀಕರಿಸಲು ಕಾಮದೇ
ನಿಂದ ಚೆಲುವನ್ನು ಎರವಲಾಗಿ ಪಡೆಯುತ್ತಾಳೆ. ಅರ್ಜು
ಮೊದಲು ಆ ಚೆಲುವಿಗೆ ಮನಸೋಲುತ್ತಾನೆ. ಮು
ಆ ಚೆಲುವಿನ ಮೈಸಿರಿಯ ನೆರವಿನಿಂದ ಹತ್ತಿರಕ್ಕೆ ಬಂ
ಚಿತ್ರೆಯ ಹೃದಯದ ಐಸಿರಿಯನ್ನು ಮೆಚ್ಚುತ್ತಾನೆ.
ಆ ಹೊರ ಚೆಲುವು ಒಂದು ಮಾಯೆ ಭ್ರಮೆ ಎಂದು
ದರೂ ಆತನ ಪ್ರೇಮ ನಿಲ್ಲುತ್ತದೆ. " Illusion is t
first appearance of truth " ಎಂದಿದ್ದಾರೆ ದಾ

ನಿಕ ಕವಿ ಠಾಕೂರರು. ಭ್ರಮೆಯೂ, ಮಾಯೆಯೂ ಸತ್ಯದ ಪ್ರಥಮ ದರ್ಶನ — ಹೂಬಿಸಿಲು ಹೊಂಬಿಸಿಲು ಹಗಲಿನ ಮುಂಗುರುಹಾದಂತೆ !

ಅಂದರೆ ಬುದ್ಧಿ - ವೈಚಾರಿಕ ಬುದ್ಧಿ ಆರಂಭದಲ್ಲಿ ವಾಸ್ತವತೆಯನ್ನು ತಪ್ಪಾಗಿಯೇ ಗ್ರಹಿಸಿತು. ಆದರೆ ಆ ತಪ್ಪು ಗ್ರಹಿಕೆಯೇ ಬುದ್ಧಿಯ ಸತ್ಯಾನ್ವೇಷಣೆಯ ಪ್ರಮಾಣ ವೆನಿಸಿತು. ವಸ್ತು ವಸ್ತುಗಳೊಳಗಿನ, ವಸ್ತು ವ್ಯಾಪಾರಗಳೊಳ ಗಿನ ಸರಿಯಾದ ನೇರವಾದ ಸಂಬಂಧ ತಿಳಿದುಕೊಂಡ ಹೊರತು ಮಾನವನ ಶುದ್ಧ ಬುದ್ಧಿಗೆ ತೃಪ್ತಿ ಇಲ್ಲ. ಆ ತಿಳುವಳಿಕೆ ಬರುವನಕವೂ ಅದರ ತಲ್ಲಣ ತಡೆಯದು. ಆದ್ದರಿಂದ ತನಗೆ ತೋಚಿದಂತೆ ಬುದ್ಧಿಯು ಕೆಲವೊಂದು ಸಂಬಂಧ ಗಳನ್ನು — ಕಾರಣ, ಹೇತು, ಲಕ್ಷಣ, ಧರ್ಮ ಇತ್ಯಾದಿ ಗಳನ್ನು — ತಾನೇ ಕಲ್ಪಿಸಿ ಅವನ್ನು ನಂಬಿಕೊಂಡು ತನ್ನ ಕಾರ್ಯ ನಿರ್ವಹಿಸಿಕೊಂಡು ಮುಂದಾಯಿತು. ಬೀಜ ಗಣಿತದಲ್ಲಿ ಅಜ್ಞಾತವಾದ ಬೆಲೆಯ ಸಂಜ್ಞೆಯೆಂದು " ಕ್ಷ " ಇಟ್ಟುಕೊಳ್ಳುವದಿಲ್ಲವೇ ? ಹಾಗೆಯೇ. ಇದೇ ರೀತಿಯಾಗಿ ಧರ್ಮ - ದೇವರು, ಸ್ವರ್ಗ - ನರಕ, ಪುಣ್ಯ - ಪಾಪ, ಸೈತಾನ - ಯಮಧರ್ಮ, ಸೃಷ್ಟಿ - ಪ್ರಳಯಗಳ ಕಥೆ ಗಳು — ಮುಂತಾದವು ಅಂದಿನ ಮಟ್ಟಿಗೆ ವಿಚಾರವಾದಕ್ಕೇ ಮನುಷ್ಯನ ಬುದ್ಧಿ ಪ್ರಾಮಾಣ್ಯದ ತಾರ್ಕಿಕ ದೃಷ್ಟಿಗೇ ಸಾಕ್ಷಿ ಗಳಾಗಿವೆ. ಅಂದಿನ ಸ್ವರ್ಣ ವಿದ್ಯೆಯಿಂದ ಇಂದಿನ ರಸಾ ಯನಶಾಸ್ತ್ರ, ಅಂದಿನ ಮಂತ್ರ ಮಾಟಗಳಿಂದ ಇಂದಿನ ವೈದ್ಯ

ಶಾಸ್ತ್ರ, ಅಂದಿನ ದೇವತಾ ವಾದದಿಂದ ಇಂದಿನ ತತ್ತ್ವಜ್ಞಾ
ಅಂದಿನ ತತ್ತ್ವಶಾಸ್ತ್ರದಿಂದ ಇಂದಿನ ವಿಜ್ಞಾನ — ಹೀಗೆ
ತಪ್ಪು ಹೆಜ್ಜೆಗಳು ನೇರದ ನಡೆಗೆ, ತೊದಲು ನುಡಿಗ
ಪ್ರೌಢಭಾಷೆಗೆ, ಭ್ರಮ ವಿಭ್ರಮವು ಬೌದ್ಧಿಕ ವಿಚಾ
ಸರಣಿಗೆ ದಾರಿಮಾಡಿಕೊಟ್ಟವು. ಈ ದಾರಿಯ ಹೆಜ್ಜೆ
ವಿವರಣೆ ಇಲ್ಲಿ ಪ್ರಸ್ತುತವಲ್ಲ.

## ೧೨. ಅಸತ್ಯದಿಂದ ಸತ್ಯಕ್ಕೆ — ಬುದ್ಧಿಯ ಶೋಧಯಾತ್ರೆಯ ಎರಡು ಪಾತಳಿ

ಜಡವನ್ನೂ, ಜೀವವನ್ನೂ, ಜೀವನವನ್ನೂ, ಜ
ತ್ತನ್ನೂ ಚರಾಚರ ಸೃಷ್ಟಿಯ ತನ್ನ ಪರಿಸರ ಪರಿಸ್ಥಿತಿಗಳನ್ನು
ಆದಿಮಾನವ ತಿಳಿದುಕೊಳ್ಳಲು ಹೆಣಗಲೇಬೇಕಾಯಿತ
ತನ್ನ ಸ್ಥಾನ ಮಾನ, ಸುತ್ತಲಿನ ಸನ್ನಿವೇಶದೊಂದಿಗೆ ತ
ಸಂಬಂಧ, ಅಲ್ಲಿಯ ಆಗು ಹೋಗುಗಳ ವಿದ್ಯಮಾನ –
ಇವೆಲ್ಲವುಗಳ ಅನಿಸಿಕೆಗಳನ್ನೆಲ್ಲ ತಿಳಿಯಾಗಿ ಅರಿತುಕೊಳ್ಳು
ಆತನ ಆಕಲನದ ವ್ಯಾಪಾರವೇ ತತ್ತ್ವಬೋಧ ಸತ್ಯಶೋ
ಗಳ ಮೊದಲಿನ ಹೆಜ್ಜೆಗಳು. ನಿಜವಾದ ಯಥಾರ್ಥವಾ
ಸಂಬಂಧ—ಸನ್ನಿವೇಶ ತಿಳಿಯುವ ತನಕ ಆತ ಕೆಲವೊಂ
ಕಾಲ್ಪನಿಕ ಸಂಬಂಧಗಳನ್ನು ಭಾವಿಸಿಕೊಂಡು ನಡೆದನ
ಇಂಥ ತಪ್ಪು ಕಲ್ಪನೆಯ ತಳಕ್ಕೂ ಸತ್ಯದೃಷ್ಟಿಯ ಹುಡ
ಕಾಟವೇ ಇದೆ.

## ಎರಡು ಪಾತಳಿ

ಈ ಹುಡುಕಾಟವೇ ಮಾನವೀ ಮನಸ್ಸಿನ ಅಥವಾ ಆ ಮನಸ್ಸಿನ ಬುದ್ಧಿ ಧರ್ಮದ ನಿಯತಕರ್ಮ. ತನ್ನ ಹಾಗು ಸುತ್ತಲಿನ ಸನ್ನಿವೇಶವನ್ನು ವಸ್ತು - ವ್ಯಾಪಾರಗಳ ಪರಿಚಯ ಮಾಡಿಕೊಡುವ ಸಂದರ್ಭಗಳನ್ನು ಕಂಡು ಕೊಳ್ಳುವ ಇಲ್ಲವೆ ಕಂಡು ಬರುವನಕ ಕಲ್ಪಿಸಿಕೊಳ್ಳುವ ಈ ಪ್ರವೃತ್ತಿ ಅಥವಾ ಒಳಗಿನ ಒತ್ತಾಯ ಎರಡು ಪಾತಳಿ ಗಳಲ್ಲಿ ಕೆಲಸ ಮಾಡುತ್ತದೆ. ಒಂದು ಪಾತಳಿ — ಮೂಲದ ಪಾತಳಿ — ಮನುಷ್ಯನಿಗೆ ಇಂಥ ಯಾವದಾದರೊಂದು ಸನ್ನಿವೇಶ – ಸಂದರ್ಭ ಇಟ್ಟುಕೊಂಡ ಹೊರತು ಕಟ್ಟಿ ಕೊಳ್ಳುವನಕವೂ ಮಾನಸಿಕ ತೃಪ್ತಿ ಆಂತರಿಕ ನೆಮ್ಮದಿ ಇಲ್ಲದಂಥ ಒಂದು ಅನಿವಾರ್ಯ ಅವಶ್ಯಕತೆ. "ಇದು ಹೀಗೆ ಏಕೆ ?" "ಈ ಸಂಗತಿ ಏಕೆ, ಹೇಗೆ, ಹೀಗಾಗಿದೆ ?" ಎಂಬ ಜಿಜ್ಞಾಸೆಗೆ ಸಮಾಧಾನ ದೊರಕಿದ ಹೊರತು ಆ ಸಂಗತಿಯೊಂದಿಗೆ ಮನುಷ್ಯ ಸುಖವಾಗಿ ಬಾಳಲಾರ; ಅಷ್ಟೇ ಅಲ್ಲ ಮನಃಸ್ವಾಸ್ಥ್ಯದಿಂದಲೂ ಬಾಳಲಾರ. ಹಾಗೆ ಬಾಳು ವವನು ಹುಚ್ಚನೊಬ್ಬನೇ ಹೊರತು ಸ್ವಯಂಪ್ರಜ್ಞೆಯವ ನಾರೂ ಅಲ್ಲ. ಈ ಪ್ರಾಥಮಿಕ ಮನಃಸ್ವಾಸ್ಥ್ಯಕ್ಕಾಗಿಯೇ ಮನುಷ್ಯ ನಿಸರ್ಗದ ಗೂಢಗಳನ್ನೆಲ್ಲ ತನ್ನಂತೆಯೇ ಕಲ್ಪಿಸಿ ಅನೇಕ ದೇವತೆಗಳನ್ನು ಅದನ್ನೂ ಮೀರಿದ ದೈವವನ್ನು, ದೇವರನ್ನು, ಪರಲೋಕವನ್ನು, ಪುನರ್ಜನ್ಮವನ್ನು, ಪರ ಕಾಯ ಪ್ರವೇಶವನ್ನು, ಅವತಾರವನ್ನು, ಉದ್ಧಾರವನ್ನು, ಶಾಪ-ಉಃಶಾಪಗಳನ್ನು, ಸ್ವಪ್ನ-ದೃಷ್ಟಾಂತಗಳನ್ನು, ಪುರಾಣ

ಪುರುಷರ ಪವಾಡಗಳನ್ನು, — ಏನೆಲ್ಲ ಎಷ್ಟೆಲ್ಲ
ಕೊಂಡು ನಂಬಿಕೊಂಡು ಬಂದದ್ದು.

ಎರಡನೆಯ ಪಾತಳಿಯಲ್ಲಿ ಈ ವಸ್ತು ವ
ಸಂಬಂಧ - ಸನ್ನಿವೇಶಗಳನ್ನು ಅರಿತುಕೊಳ್ಳುವ ಒತ್ತಾ
ಮಾನವನ ಅಸ್ತಿತ್ವದ, — ಬಾಳಬೇಕು, ಬಾಳಿನ
ಗತಿಗಳನ್ನು ಆಳಬೇಕು, ತನ್ನ ಬಾಳು ಆದಷ್ಟು ಹ
ತಾಳಬೇಕು ಎಂಬ ಜೀವನದ ಹಟದ ಪರಿಣಾಮವಾ
ತ್ತದೆ. ಇಲ್ಲಿ ಬರೀ ಸ್ವಾಸ್ಥ್ಯವಷ್ಟೇ ಅಲ್ಲ, ಸಾಮರ್ಥ್ಯಕ
ಮಾನವ ಬುದ್ಧಿಯ ಚಟುವಟಿಕೆಗಳನ್ನು ನಡೆಯಿಸುತ್ತಾ
ಇಲ್ಲಿ ಬುದ್ಧಿ ವಿಚಾರವಾಗುತ್ತದೆ. ಅದು ವಿಚ
ಪ್ರಪಂಚದ ಮೇಲೆ ತನ್ನ ಅಂಕೆಯನ್ನು ಸ್ಥಾಪಿಸಲು
ಗುತ್ತದೆ. ಜಗತ್ತನ್ನು, ಪ್ರಪಂಚವನ್ನು ವಾಸ್ತವವಾಗಿ
ರಂಗವಾಗಿ ತನ್ನಿಂದ ಪ್ರತ್ಯೇಕವಾಗಿ ಗ್ರಹಿಸಲು ಆಕ
ಮಾಡಿಕೊಳ್ಳಲು ಮನುಷ್ಯ ಯತ್ನಿಸುತ್ತಾನೆ. ಭೌತಿಕ
ವಾಸ್ತವತೆಗಳ ಸತ್ಯದೊಂದಿಗೆ ಬೌದ್ಧಿಕವಾಗಿಯೇ ವಿಚ
ಮಾತ್ರದಿಂದಲೇ ಆತ ತನ್ನ ನಿಲುಕು - ನಂಟು ಸ್ಥಾ
ತೊಡಗುತ್ತಾನೆ. ಮೊದಲನೆಯ ಪಾತಳಿಯಲ್ಲಿ ಆ
ಬೌದ್ಧಿಕತೆ ಆತ್ಮನಿಷ್ಠ; ಎರಡನೆಯುದರಲ್ಲಿ ಅದು ವಸ್ತುನಿ
ಮೊದಲನೆಯ ಪಾತಳಿಯಲ್ಲಿ ಸಾಮಂಜಸ್ಯ ಸ್ಥಾಪಿತವ
ದಿದ್ದರೆ ಆತ ಎರವಾಗುವದು ತನ್ನ ಪ್ರಜ್ಞೆಗೆ, ಇದಿರಾಗುವ
ಭ್ರಾಂತಿಗೆ. ಎರಡನೆಯುದರಲ್ಲಿ ಸಾಮಂಜಸ್ಯ ಕಲ್ಪಿಸಿಕೊಳ್ಳ
ಹೋದರೆ ಆತ ಎರವಾಗುವದು ತನ್ನ ಸುಖಕ್ಕೆ ಕ್ಷೇಮ

ಇದಿರಾಗುವದು ದುರ್ದಶೆಗೆ, ವಿನಾಶಕ್ಕೆ.

ಈ ಮೂಲಕವೇ ಮನುಷ್ಯನಲ್ಲಿ ಇನ್ನೊಂದು ಚಟ ಬೆಳೆದು ಬಂದಿದೆ. ಅದೆಂದರೆ ತನ್ನ ಅನಿಸಿಕೆ ನೆನಸಿಕೆಗಳಿಗೆ, ಧಾರಣೆ ಧೋರಣೆಗಳಿಗೆ ಹೇಗಾದರೂ ಬುದ್ಧಿಯ ಮೆರುಗನ್ನು ವಿಚಾರವಂತಿಕೆಯ ಒಪ್ಪವನ್ನು ಕೊಡುವದು. ತಾನು ಬುದ್ಧಿವಂತ, ತನ್ನ ನಡತೆ ಬುದ್ಧಿವಂತಿಕೆಯದಾಗಿ ಇರಬೇಕು ಇಲ್ಲವೆ ತೋರಬೇಕು — ಎಂಬ ಹಂಬಲ ಮಾನವನಿಗೆ ಸದಾ ಜಾಗೃತವಾಗಿರುತ್ತದೆ. ಇದರಿಂದಲೇ ಈ **ಬೌದ್ಧಿಕ ಆತ್ಮ ಸಮರ್ಥನೆ** ಆರಂಭವಾಗುತ್ತದೆ. ತನ್ನ ಕೃತಿ, ಕಲ್ಪನೆ ಎಷ್ಟೇ ತಿಳಿಗೇಡಿತನದ್ದಾಗಿರಲಿ, ಎಷ್ಟೇ ಅನೈತಿಕವಾಗಿರಲಿ ಅದನ್ನು ಇತರರಿಗೂ ತನಗೂ ಸಮಂಜಸವೆಂದೂ, ಸುಸಂಗತವೆಂದೂ, ಬುದ್ಧಿವಂತಿಕೆಯದೆಂದೂ ಸಿದ್ಧಮಾಡಿ ಅಥವಾ ಸಾಧಿಸಿ ಕಾಣಿಸುವ ಒಂದು ದುರ್ದಮ್ಯವಾದ ಪ್ರೇರಣೆ ಮನುಷ್ಯನಲ್ಲಿರುತ್ತದೆ. ಮನುಷ್ಯ ಬುದ್ಧಿಜೀವಿ ಎಂಬುದಕ್ಕೆ ಇದೊಂದು ವ್ಯಸ್ತ ಪ್ರಮಾಣ.

## ೧೩. "ಪ್ರಜ್ಞಾವಾದ" — ಬೌದ್ಧಿಕ ಆತ್ಮ ಸಮರ್ಥನೆ

ಈ ಬೌದ್ಧಿಕ ಆತ್ಮ ಸಮರ್ಥನೆ ನಿಜವಾದ ವಿಚಾರವಾದವಲ್ಲ, ವಿವೇಕ ವಾಣಿಯಲ್ಲ. ಇದನ್ನೆ ಶ್ರೀಕೃಷ್ಣ ಭಗವದ್ಗೀತೆಯಲ್ಲಿ "ಪ್ರಜ್ಞಾವಾದ" ವೆಂದನು. ಇದು

" ಬುದ್ಧಿಯೋಗ " ದಿಂದ ಬೇರೆ. ಅರ್ಜುನ ಕುರು
ದಲ್ಲಿ ಸ್ವಜನವಧೆಯ ರಕ್ತರಂಜಿತ ಹಿಂಸಾಕಾಂಡಕ್ಕೆ
ಅಳುಕಿ ತತ್ತರಿಸುವಾಗ ಒಳ್ಳೇ ಪ್ರಾಜ್ಞನಂತೆ ಪಾಪ-
ಧರ್ಮ-ನೀತಿಗಳ ಪಾಂಡಿತ್ಯಪೂರ್ಣವಾದ ವ್ಯಾ
ಮಾಡಿದನು. ಯಾತಕ್ಕೆ ? ತನ್ನ ಹೃದಯ ದೌರ್ಬಲ್ಯ
ಮುಚ್ಚಿಕೊಳ್ಳಲಿಕ್ಕೆ ! — ಆತ್ಮ ಮತ್ತು ಪರವಂಚನೆ
ಲಿಕ್ಕೆ. ಅದನ್ನೇ ಕುರಿತು " ಪ್ರಜ್ಞಾವಾದಾಂ ಚ ಭಾಷಸೆ
ಎಂದು ನೇರವಾಗಿ ಚುಚ್ಚಿ ಶ್ರೀಕೃಷ್ಣ ಛೀ ಹಾಕಿದ.
ದೌರ್ಭಲ್ಯವನ್ನು, ಕಾಮನೆಯನ್ನು, ಭಯವನ್ನು ಪ್ರಾಜ್ಞ
ಹೊರಲೇಪದಲ್ಲಿ ಖೊಟ್ಟಿ ನಾಣ್ಯದಂತೆ " ಚಲಾಯಿಸು
" ಕಲಿಸದೆ ಬರ್ಪ ಕೌಶಲ"ವೇ ಈ ಬೌದ್ಧಿಕ ಆತ್ಮ
ರ್ಥನೆ ಅಥವಾ " ಪ್ರಜ್ಞಾವಾದ ". ಇದರಿಂದ ನಾವು ಜ
ಕೊಳ್ಳಬೇಕು. ಆದರೆ ಇಂಥ ವಾದವೂ ಮೂಲದಲ್ಲಿ ಏ
ಒಪ್ಪಿಕೊಳ್ಳುತ್ತದೆ ? ಮನುಷ್ಯನಿಗೆ ಮನಃಶಾಂತಿಗಾಗಿ,
ಸ್ವಾಸ್ಥ್ಯಕ್ಕಾಗಿ, ಆತ್ಮಪ್ರತಿಷ್ಠೆಗಾಗಿ ಕೊನೆಗೂ ಬು
ಸಮ್ಮತಿ ಮತ್ತು ಸಮರ್ಥನೆ ಬೇಕೇ ಬೇಕು ! ಮನ
ನಿಗೆ ಎಂಥ ತಿಳಿಗೇಡಿತನದಿಂದ ನಡೆಯಲೂ ಕಠಿಣ
ಸುವದಿಲ್ಲ. ಆದರೆ ತನ್ನ ಅಂಥ ನಡತೆಗೂ ಬ
ವಂತಿಕೆಯ ಹೇತುವನ್ನೋ ಹೊದಿಕೆಯನ್ನೋ ಕೊ
ಇರುವದು ಮಾತ್ರ ಆತನಿಗೆ ಅಶಕ್ಯವೆನಿಸು
ಅಸಹ್ಯವೆನಿಸುತ್ತದೆ !

ಇಲ್ಲಿ ಬುದ್ಧಿಯ ಪ್ರಭಾವಕ್ಕೆ ಮತ್ತು ಪ್ರಭು

ಇರುವ ಇನ್ನೊಂದು ಆತಂಕ ಗಮನಿಸಬೇಕಾಗುತ್ತದೆ. ಆತಂಕ ಬುದ್ಧಿಯ ಇತಿ ಮಿತಿ. ಬುದ್ಧಿವಾದಿಯು ವಿಚಾರ ವಾದಿಯು ಮೊದಲಿಗೆ ಒಪ್ಪಿಕೊಳ್ಳತಕ್ಕ ಅಂಶ ಬುದ್ಧಿಯ ಾಗು ವಿಚಾರದ ಪರಿಮಿತಿ. ಮಾನವನ ವಿಕಾಸ ಕ್ರಮ ಲ್ಲಿ ಹಿಂದೆಯೇ ಹೇಳಿದಂತೆ — ಬುದ್ಧಿ ನಿನ್ನೆ ಮೊನ್ನೆಯ ೂಸು, ಮನುಷ್ಯ ಹಿಂದೂ, ಇಂದೂ, ಮುಂದೂ ವಿಕಾರ ಳ ಹುತ್ತ - ಭಾವನೆಗಳ ಹೊದರು. ಮನುಷ್ಯ ತನ್ನ ್ರಕೃತಿ ಸಹಜವಾಗಿಯೇ ತನ್ನ ಮೂಲ ಪ್ರವೃತ್ತಿಗಳ ತ್ತಾಯಕ್ಕೆ ಚಲಿಸುತ್ತಾನೆ. ಅವುಗಳಿಂದ ಸ್ಫುರಣಗೊಂಡ ಾವ ತರಂಗಗಳಲ್ಲಿ ಓಲಾಡುತ್ತಾನೆ. ಮನುಷ್ಯನ ಕ್ರಿಯಾ ಕ್ತಿ ಅವನ ಇಚ್ಛಾಶಕ್ತಿ. ಅದಕ್ಕೆ ಒತ್ತಡವನ್ನೂ ಗತಿಯನ್ನೂ ೂರೈಸುವದು ಅವನ ಬುದ್ಧಿ ಅಲ್ಲ. ಭಾವನೆ — ಎಂಜಿ ಗೆ ಉಗಿ ಇದ್ದಂತೆ, ಯಂತ್ರಕ್ಕೆ ಡಾಯನೆಮೋ ಇದ್ದಂತೆ. ್ವಾಭಾವಿಕವಾಗಿಯೇ ಮನುಷ್ಯ ಮೊದಲು ಇಚ್ಛಿಸಿ, ಆ ಚ್ಛೆಗೆ ಬೆಂಬಲವಾಗಿ ಅದರ ಹಂಬಲದಲ್ಲಿ ಭಾವನಾಮಯ ಾಗಿ ವರ್ತನೆಗೆ ಇಳಿಯುತ್ತಾನೆ ಮತ್ತು ವರ್ತನೆಯ ್ಯಾವಹಾರಿಕ ತೊಡಕುಗಳನ್ನು ಬಗೆಹರಿಸಿಕೊಳ್ಳಲಿಕ್ಕೆ ುದ್ಧಿಯನ್ನು ಬಳಸಿಕೊಳ್ಳುತ್ತಾನೆ. " ಶ್ರದ್ಧಾಮಯೋಽಯಂ ುರುಷಃ " ಎಂಬ ಗೀತಾ ವಚನ ಈ ಅರ್ಥದಲ್ಲಿ ಸತ್ಯ.

ಆದರೆ ಹಾಗೆಂದ ಮಾತ್ರಕ್ಕೆ ಬುದ್ಧಿಯ ಮಹತ್ವ ಕಡಮೆ ುಿಂದಲ್ಲ. ಮಾನವ ಜೀವನದ ಚಾಲಕಶಕ್ತಿ ಪ್ರೇರಕಸತ್ವ ಾದ ಭಾವನೆ, ಅದರ ಮೂಲವಾದ ಪ್ರವೃತ್ತಿ ಇವು

ಎಂದೆಂದಿಗೂ ಮಹತ್ವದವೇ. ಆದರೆ ಅವುಗಳನ್ನು ಬುದ್ಧಿ
ನಿಯಾಮಕವಾಗಿ ನಿರ್ಣಾಯಕವಾಗಿ ಆಳಬೇಕು. ಭಾ
ಕುರುಡು; ಬುದ್ಧಿ ಕುಂಟು. ಆದರೆ ಕುರುಡನ ಹೆಗಲ ಮೆ
ಕುಂಟ ಕೂತು ದಾರಿಕಾಣಿಸಬೇಕು, ಗುರಿ ತಲ್ಪಿಸಬೇ
ಬುದ್ಧಿವಾದ ಭಾವನೆಯ ಮತ್ತು ಪ್ರವೃತ್ತಿ-ಪ್ರೇರಣೆಗಳ
ಯನ್ನು ಅಭಿವ್ಯಕ್ತಿಯನ್ನು ಅಲ್ಲಗಳೆಯುವದಿಲ್ಲ, ಕಡೆಗಣ
ವದೂ ಇಲ್ಲ. ಆದರೆ ಉತ್ತರೋತ್ತರ ಮನುಷ್ಯ ಜೀವನ
ಪಶುಗಳ ಕುರುಡು ಬದುಕಿನಿಂದ ಬೇರೆಯಾಗಿ ಹಿರಿದ
ಬಂದದ್ದು ಆ ಅಂಧಶಕ್ತಿಗಳ ನಿಯಂತ್ರಣವನ್ನು ಬುದ್ಧಿ
ಮಾಡಿದ್ದರಿಂದಲೇ—ಎಂಬುದನ್ನು ಆತ ಒತ್ತಿ ಹೇಳುತ್ತಾ
ಬುದ್ಧಿಯೊಂದೇ ಮಾನವತೆಯ ಪ್ರತಿಜ್ಞೆ ಎಂದ ಮಾತ್ರ
ಮಾನವತೆಯ ಎಲ್ಲ ಬದುಕು ಬದ್ಧಿಯ ಪ್ರಪಂಚವೆಂ
ಸಾಮಾನ್ಯವಾಗಿಯೂ ಈ ಮಾತು ಯಾರಿಗೂ ತಿಳಿಯುತ್ತ
ಕಲೆ, ಕಾವ್ಯ, ಕ್ರೀಡೆ, ಕಾಮ-ರತಿ ಇವುಗಳಲ್ಲಿ ಮನ
ಬುದ್ಧಿಗಿಂತ, ತರ್ಕ - ವಿಚಾರಕ್ಕಿಂತ ಬಾಳಿನ ಆಳದ ಭಾ
ಸ್ಫೂರ್ತಿಯಿಂದಲೇ ದುಡಿಯುತ್ತಾನೆ, ದುಡುಕುತ್ತಾ
ದುಷ್ಯಂತ ಮೊತ್ತಮೊದಲಿಗೆ ಶಕುಂತಲೆಯನ್ನು ಕಂ
ಆಕೆಯ ಚೆಲು ಮೊಗದ ಹತ್ತಿರ ಸುಳಿಯುವ ತುಂಬಿಯ
ಕಂಡು ತುಂಬ ಹೇವಪಡುತ್ತಾನೆ. "ವಯಂ ತತ್ವಾನ್ವೇಷ
ಮಧುಕರ ಹತಾಃ ತ್ವಂ ಖಲು ಕೃತೀಃ!" ಎಂದು ಉದ್ಗ
ತ್ತಾನೆ. ಈ ಉದ್ಗಾರ ನಮ್ಮ ಬಾಳಿಗೂ ಅನ್ವಯಿಸುತ್ತ
ಸೌಂದರ್ಯ-ಮಾಧುರ್ಯಗಳ ನಿಧಿಯ ಮುಂದೆ ತತ್ವಾನ್ವೇ
ಮಾಡುತ್ತ ಕುಳಿತ ಬುದ್ಧಿವಾದಿ, ಮುತ್ತನ್ನು ಒಡೆದು ಒ

ರಾಮು' ನಿದ್ದಾನೋ ನೋಡುವ ಹನುಮಂತನಷ್ಟೇ ಪ್ರಾಮಾಣಿಕ ಹುಂಬನಾಗುತ್ತಾನೆ. ಪೂರ್ಣ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಯತ್ನಿಸುವಾತನು ಜೀವನದ ತತ್ವಭಾಷ್ಯದ ಭಾಮತಿಯೂ ಆಗಬೇಕು. ಅದರ ಕೌತುಕದ ರಸಾನುಭೂತಿಯ ಭವಭೂತಿಯೂ ಆಗಬೇಕು. ಆದ್ದರಿಂದ ವಿಚಾರವಾದದ ಅಧಿಕಾರ ಕ್ಷೇತ್ರ ವ್ಯಾವಹಾರಿಕ ಪ್ರಪಂಚ, ತಾತ್ವಿಕ ಪ್ರಪಂಚ, ಸತ್ಯದ ಸಿದ್ಧಾಂತದ ಪ್ರಪಂಚ, ಹಿತಾಹಿತ ನಿರ್ಣಯದ ಪ್ರಪಂಚ, ಕಾರ್ಯಾಕಾರ್ಯ ವ್ಯವಸ್ಥಿತಿಯ ಪ್ರಪಂಚ; ಹೊರತು ಶುದ್ಧ ರಸಪ್ರಪಂಚವಲ್ಲ, ಭಾವಪರವಶತೆಯ ಪ್ರಪಂಚವಲ್ಲ. ರಸಭಾವ ಕಲಾಪ್ರಪಂಚವನ್ನು ಆಳುವ ನಿಯಾಮಕ ಸತ್ತೆ ಸೌಂದರ್ಯದ್ದು, ರಸಿಕತೆಯದು. ಅಲ್ಲಿ ವಿಚಾರವಾದ ಕೇವಲ ಪರಿಚಾರಿಕೆ-ಪರಿಚಾಯಿಕೆ.

## ೧೪. ಬುದ್ಧಿಗೆ ಒಳಪಡದ ಕ್ಷೇತ್ರ - ಮೂಲ ಪ್ರವೃತ್ತಿಗಳ ಪ್ರಪಂಚ

ಅಂದರೆ ಮನುಷ್ಯ ಜೀವನದಲ್ಲಿ ವಿಚಾರವಾದಕ್ಕೆ ಹೊರಪಟ್ಟ ಅಥವಾ ಪೂರ್ತಿ ಒಳಪಡದ ಕೆಲವೊಂದು ಬೌದ್ಧಿಕ ಕ್ಷೇತ್ರಗಳಿದ್ದೇ ಇವೆ. ಅದೇರೀತಿ, ಇತರ ಕ್ಷೇತ್ರಗಳಲ್ಲಿಯೂ ಮನುಷ್ಯ ವಿಚಾರದ ಅಧೀನನಾಗಿಯೇ ಅಧಿನಾಯಕತ್ವ ಒಪ್ಪಿಕೊಂಡೇ ಕೆಲಸಮಾಡುವದಿಲ್ಲ- ಸಾಮಾನ್ಯವಾಗಿ ಮಂದಿ ಇಚ್ಛಾ ಪ್ರಧಾನರಾಗಿರುತ್ತಾರೆ. ಅನಂತರ ಅವರು ಭಾವನಾ ಪ್ರಧಾನರೇ. ಬುದ್ಧಿಪ್ರಧಾನರಾಗಿ ನಡೆ-ನುಡಿಯುವದು ಕಡ-

ಮೆಯೇ. ಬದುಕಿಗೆ ಗತಿ ಕೊಡುವ ಶಕ್ತಿ ಭಾವನೆಯ
ಗುರಿಗಾಣಿಸುವಶಕ್ತಿ ಮೂಲ ಪ್ರವೃತ್ತಿಗಳದು. ಅ
ಆಳಿಬಂದದ್ದು ಅಹಂಕಾರ ಅಥವಾ ಇಚ್ಛೆ. ಹೀಗಾಗಿ
ಬದುಕಿನಲ್ಲಿ ಬುದ್ಧಿಗಿಂತ ಭಾವನೆಗೆ, ಇಚ್ಛೆಗೆ, ಹಟಕ್ಕೆ ಶ್ರ
ವಿಪರೀತ ಮಹತ್ವ ಬಂದಿದೆ. ಆದರೆ ಇದರಿಂದಲೇ ಜಗ
ಘನತೆಯೂ ಜಡತೆಯೂ ಎರಡೂ ಉಂಟಾಗಿವೆ. ಅದ್ದ
ಜೀವನದ ಇಚ್ಛಾಮಯ ಹಾಗೂ ಭಾವನಾಮಯ ಅಂ
ಗಳ ಮೇಲೆ ಬುದ್ಧಿಯ ಆಧಿಪತ್ಯ ಸ್ಥಾಪಿತವಾಗಲೇಬೇ
ಅದರಲ್ಲಿಯೇ ಮಾನವತೆಯ ಸಾರ್ಥಕತೆ ಇದೆ. ಮಾನ
ಮಾನವನಾಗಿ ಬಾಳಬೇಕಾದರೆ ಅವನ ಪ್ರವೃತ್ತಿ ಭಾವ
ನುಗ್ಗಾಟ ನೆಗೆದಾಟಗಳಿಗೆ ಬುದ್ಧಿಯ ಕಡಿವಾಣ ಬೀಳಬೇ

ಕಾಮ ಕ್ರೋಧಾದಿ ಷಡ್ವಿಕಾರಗಳು ಈ ದೇಹ
ರಥದ ಕುದುರೆಗಳು. ಬುದ್ಧಿಯೇ ಅದರ ಸಾರಥಿ.
ಥಿಯನ್ನು ಬದಿಗೊತ್ತಿ ಅಹಂಕಾರವೇ ಕೈಗೆ ಲಗಾ
ಎತ್ತಿಕೊಂಡರೆ ರಥ ಹಳ್ಳಕ್ಕೋ ಹೊಂಡಕ್ಕೋ ಬೀಳು
ಖಂಡಿತ. "ಡ್ರೈವ್ಹರನ ಕೂಡ ಮಾತನಾಡಬಾರ
ಎಂದು ಇಂದು ಬಸ್ಸುಗಳಲ್ಲಿ ಸೂಚನೆ ಬರೆದಿರುತ್ತಾರೆ.
ಸೂಚನೆ ವಿಚಾರವಾದದ ಸೂತ್ರ. ಯಜಮಾನನಿಗೆ
ಗುರಿ ಮುಟ್ಟಬೇಕಾಗಿದೆ. ಅದಕ್ಕೆ ನೂರಾರು ದಾರಿಗ
ಆದಷ್ಟು ಹತ್ತಿರದ ದಾರಿಯಿಂದ, ನೇರದ ದಾರಿಯಿ
ವಿಲಂಬವಾಗದ ದಾರಿಯಿಂದ ನಿಲ್ದಾಣಕ್ಕೆ ತಲುಪಿ
ಕರ್ತವ್ಯ ಮತ್ತು ಕೌಶಲ್ಯ ಡ್ರೈವ್ಹರನದಲ್ಲವೇ ? ನ

ಯಜಮಾನನೇ ಡ್ರೈವ್ಹರನ ಸೀಟು ಆಕ್ರಮಿಸಿ ಗಾಡಿಯೋಡಿಸ ತೊಡಗಿದರೆ ಮುಂದೆ ಗತಿ ಏನಾದೀತು ?

ಬುದ್ಧಿ ಮನೋವಿಕಾಸ ಕ್ರಮದಲ್ಲಿ ಮೊನ್ನೆಯ ಕೂಸು. ಆದ್ದರಿಂದ ವಿಕಾರಗಳು ವಿಜೃಂಭಿಸುವಾಗ, ಭಾವನೆಗಳ ಪ್ರಕೋಪವೆದ್ದಾಗ ಬುದ್ಧಿ ತತ್ತರಿಸುವದು ಸಹಜ. ಅಂಥಲ್ಲಿ ಎಷ್ಟೋ ಸಲ ಭಾವಾವೇಶದಿಂದಲೇ ಕಾರ್ಯಗಳು ಜರುಗುತ್ತವೆ, ಜರುಗಲೂ ಬೇಕು. ಆದರೆ ಇಂಥ ಕಾರ್ಯ ಸ್ಥಿರವಲ್ಲ. ಎಷ್ಟೇ ಅಮೂಲ್ಯವಿದ್ದರೂ, ಮಹತ್ವದ್ದಾಗಿದ್ದರೂ, ಆಕರ್ಷಕ ಉನ್ಮಾದಕವಿದ್ದರೂ ಸ್ಥಿರವಲ್ಲ. ಭಾವಾವೇಶ ಜೀವನದ ಸ್ಥಾಯಿಯಲ್ಲ. ವಿಮರ್ಶೆಯಿಂದ ಸ್ಫುಟವಾದ ವಿವೇಕದಿಂದ ರುಚಿಯಾದ ವಿಚಾರದಿಂದ ಸುಸೂತ್ರವಾದ ಚಟುವಟಿಕೆಯೇ ತಾಳಿಕೆಯದು, ಬಾಳಿಕೆಯದು. ಆದ್ದರಿಂದ ಬುದ್ಧಿಯ ಪ್ರಾಧಾನ್ಯವನ್ನು ಒಪ್ಪಿಕೊಂಡ ಮಾತ್ರಕ್ಕೆ ಭಾವನೆಗಳ ಮತ್ತು ಪ್ರವೃತ್ತಿಜನ್ಯವಾದ ಬಾಳಿನ ಪ್ರೇರಣೆಗಳ ಪ್ರಾಬಲ್ಯವನ್ನು ಅಲ್ಲಗಳೆದಂತಲ್ಲ. ಅಲ್ಲಗಳೆದರೆ ಬುದ್ಧಿಯೂ ಬದುಕಲಾರದು !

ಹಾಗಿದ್ದರೆ ಬುದ್ಧಿಯ ಸ್ವರೂಪವೇನು ? ಅದರ ಕಾರ್ಯವೇನು ? ಪ್ರಾಣಿ - ಪಶು - ಮನುಷ್ಯ ಹೀಗೆ ತ್ರಿವಿಕ್ರಮ ರೂಪತಾಳಿ ನಿಂತ ಜೀವದ ವಿಕಾಸದಲ್ಲಿ ಬೇರಿನಿಂದ ಹೂವು ಬೇರೆಯಾಗಿ ಕಂಡರೂ ಭಿನ್ನವಲ್ಲ. ಮೊದಲು ನಿರವಯವ ನಂತರ ಸಾವಯುವ, ಮೊದಲು ನಿರೀಂದ್ರಿಯ

ನಂತರ ಸೇಂದ್ರಿಯವಾಗಿ ಬೆಳೆಯುತ್ತ ಬಂದ ಕ್ರಿಮಿ-ಕಿ
ಜೀವ-ಜಂತುಗಳಲ್ಲಿ ತೋರಿಬರುವ ಪ್ರತಿಕ್ಷಿಪ್ತ ಅಥ
ಪರಾವರ್ತನ ಕ್ರಿಯೆಯೇ ಮುಂದೆ ಪಶುವಿನಲ್ಲಿ ಮ
ಪ್ರವೃತ್ತಿ ವನ್ಯಪ್ರತಿಕ್ರಿಯೆಯಾಗಿ ಅದರೊಳಗಿಂದಲೇ ವ
ರನೂ ವನಚರನೂ ಆಗಿ ಬಂದ ಮಾನವನಲ್ಲಿ ಬುದ್ಧಿಪೂವ
ಮನೋವ್ಯಾಪಾರವಾಯಿತು. ಆದ್ದರಿಂದ ನಾವು ಬುದ್ಧಿ
ಸ್ವರೂಪವನ್ನು ಅರಿತುಕೊಳ್ಳುವದಕ್ಕಾಗಿ ಮೂಲಪ್ರವ
ಗಳ ಚರ್ಯೆಗಳನ್ನು ಚರ್ಚಿಸಬೇಕು.



ಮೂಲಪ್ರವೃತ್ತಿಗಳೆಂದರೇನು ? ಅವು ಕಲಿಯ
ಬರುವ ಚಟುವಟಿಕೆಗಳು; ಸಹಜ ಪ್ರತಿಕ್ರಿಯೆಗಳು; ನ
ಕೆಲವೊಂದೇ ಕ್ರಿಯೆಯ ಕುರಿತು ಒಲಿಯುವ ಆನುವಂ
ವಾದ ಒಲವುಗಳು. ಆಡುವದು, ಉಣ್ಣುವದು, ಓ
ವದು, ಕಾದು ಗೆದೆಯುವದು, ಕಾಲ್ದೆಗೆಯುವದು, ಒಲಿ
ಒಲಿಸುವದು, ಮದುವೆಯಾಗುವದು, ಮುದ್ದುಮಾ
ವದು — ಇವೇ ಮೊದಲಾದ ಕೆಲಸದ ಅನಾದಿಯಿಂದ
ಬಂದ ಅಚ್ಚುಗಳು. “ಅಶಿಕ್ಷಿತ ಪಟುತ್ವ”ದ ಅಮಾನ
ವೈಶಿಷ್ಟ್ಯಗಳು.

ವಂಶದ ವಿಸ್ತಾರದ ಇತಿಹಾಸದಲ್ಲಿ, ಮನುಷ್ಯಪಶ
ತನ್ನ ಆಯುಷ್ಯದಲ್ಲಿ ಆಗಾಗ್ಗೆ ಆಕಸ್ಮಿಕವಾಗಿ ಒದಗುವ
ಶ್ಯಕ ಪ್ರಸಂಗಗಳನ್ನು ವಿಲಂಬವಿಲ್ಲದೆ, ವಿಶೇಷ ವಿಚಾ
ಇಲ್ಲದೆ ಎದುರಿಸಬೇಕಾಗಿತ್ತು, ಎದೆಗೊಡಬೇಕಾಗಿ

ಇದಕ್ಕಾಗಿ ಬೆಳೆಸಿಕೊಂಡ ವರ್ತನೆಯ ಮಿತವಾದ ಉಪಯುಕ್ತವಾದ ತತ್‌ಕ್ಷಣದ ಚಟುವಟಿಕೆಗಳೇ ಈ ಪ್ರವೃತ್ತಿ ಚರ್ಯೆಗಳು. ಬಾಳಿನ **ತಾತ್ಕಾಲಿಕ ಭದ್ರತೆಗೆ,** ತದ್ರೂಪವಾಗಿ ಬರುವ ನಿಕರದ ಪ್ರಸಂಗಗಳಿಗೆ ಇವು ಸಾವಧಾನತೆಯ ಸಾಧನಗಳು. ಆದರೆ ಇವುಗಳಲ್ಲಿ ಬಲವಾದ ಒಂದು ವೈಗುಣ್ಯವೂ ಇದೆ. ಆ ವೈಗುಣ್ಯ ಪ್ರವೃತ್ತಿಗಳ ವೈಶಿಷ್ಟ್ಯದೊಳಗಿಂದಲೇ ಬಂದದ್ದು. ಈ ಪ್ರವೃತ್ತಿಗಳು–ತನ್ನಾರಿ ತೋಚುವ ಬಾಳಿನ ಕ್ರಿಯೆ ಪ್ರತಿಕ್ರಿಯೆಗಳು—**ಒಂದೇ ಮಾದರಿಯ ಪುರಾತನ, ಸನಾತನ ಸ್ವರೂಪದ ಸನ್ನಿವೇಶಗಳಿಗಾಗಿಯೇ** ನಮ್ಮನ್ನು ಸಜ್ಜುಗೊಳಿಸಬಲ್ಲವು. ಮನುಷ್ಯನ ಉತ್ಕ್ರಾಂತಿಯ ಉದಯಕಾಲದಿಂದಲೂ ಅವೇ ಬಗೆಯ ಪ್ರಸಂಗಗಳನ್ನು ಎದುರಿಸಲು ಅವೇ ಬಗೆಯ ಚಟುವಟಿಕೆಗಳ ಪಡಿಯಚ್ಚುಗಳಲ್ಲಿ ನಮ್ಮ ಮನಸ್ಸನ್ನು ಎರಕ ಹೊಯ್ದು ಬಂದ ಮೂಲಕ ಈ ಪ್ರವೃತ್ತಿಗಳು ಅನುಭವದ ಪ್ರಾಚೀನತೆಯಿಂದ ಪರಂಪರೆಯಿಂದ ಬದ್ಧಮೂಲವಾಗಿ ಬಂದ ಚಟುವಟಿಕೆಯ ಚಟಗಳಾಗಿ ಬಿಟ್ಟವು. ಹಿಂದಿನ ನಮ್ಮ ಬೇಟೆ-ಬೆಟ್ಟಗಳ ಬಿಕ್ಕಟ್ಟಿನ ಬದುಕಿನಲ್ಲಿ, ಪಶುಪಾತಳಿಯ ಅವಸ್ಥೆಯಲ್ಲಿ, ಒತ್ತಡ-ಒತ್ತರಗಳ ಪ್ರಸಂಗಗಳಲ್ಲಿ ಇಂಥ ಚಟಗಳು ತುಂಬ ತಕ್ಕ ಉಪಯೋಗದವಾದವು. ಅಂಥ ಪ್ರಸಂಗಗಳಲ್ಲಿ ಈಗಲೂ ನಾವು ಪ್ರವೃತ್ತಿ ಸುಲಭವಾಗಿಯೇ ಫಕ್ಕನೆ—ಎಲ್ಲರೂ ಎಲ್ಲೂ ಒಂದೇ ಸವನೆ ವರ್ತಿಸುತ್ತೇವೆ. ಅಂದರೆ, ಈ ಪ್ರವೃತ್ತಿಗಳು ನಮ್ಮನ್ನು ನಿನ್ನೆಗಾಗಿ ಅಣಿಮಾಡುತ್ತವೆ, ಇಂದಿಗಾಗಿ ಅಲ್ಲ; ಅಂದಾಗ ನಾಳೆಯ ಬಗ್ಗೆ ಕೇಳಬೇಕೇ ?

## ೧೫. ವಿಚಾರದ ಉಗಮ; ವಿವೇಕದ ಉದಯ

ಕೆಲವು ಉದಾಹರಣೆಗಳಿಂದ ಈ ಮಾತು ತಿಳಿದೀತ
ಹರಿದು ಬರುವ ಹಾವು ಕಂಡು ಕೂಸೂ ದಿಗಿಲುಗೊಂಡ
ಓಡುವದು. ಆದರೆ ಮದ್ದು ತುಂಬಿದ ತುಬಾಕಿ ತೊಡೆಂ
ಮೇಲಿಟ್ಟುಕೊಂಡು ಪರಿವೆ ಇಲ್ಲದೆ ಆಡುವದು ! ಸೊಕ್ರೆಟಿ
ನಂಥ ಘನತತ್ತ್ವವೇತ್ತನೂ ಪರಮಜ್ಞಾನಿಯೂ ಝಾಂತೀ
ಯಂತಹ ಮೂರ್ಖ ಹೊಯ್ಕಾಲಿಯನ್ನು ಕೊರಳಿ
ಕಟ್ಟಿಕೊಂಡು ಅಂಜುತ್ತ ಅಳುಕುತ್ತ ಬಗೆಗಾಣದೆ ಬಾ
ಬಹುದು, ಇಲ್ಲವೆ ಹೊರವಿರುಗಿನ ಬೆಡಗುಗಾತಿಯ ಬಿನ್ನಾ
ಗಿತ್ತಿಯ ಕೈಗೊಂಬೆಯಾಗಿ ಕುಣಿಯಬಹುದು. " ಇಂದ್ರಿಂ
ಗ್ರಾಮ "ವು " ಪಂಡಿತನ " " ಅಪಕರ್ಷ "ಕ್ಕೆ ಕಾರ
ವಾಗಬಹುದು. ಮೈಲಿ, ಪ್ಲೇಗುಗಳಂಥ ಪ್ರಾಣಹಾ
ಪಿಡುಗುಗಳ ಭೀಕರ ವಿಷಜಂತು ಸೋಂಕುಗಳಿ
ನಾವು ಹೆದರುವದಿಲ್ಲ. ಆದರೆ ಪ್ರಾಚೀನದಿಂದಲೂ ಹೆ
ರುತ್ತ ಬಂದ ಗುಡುಗು, ಮಿಂಚು, ಕತ್ತಲೆ, ಕಗ್ಗವಿಗಳಿ
ಕಾರಣವಿಲ್ಲದೇನೇ ಅಂಜುತ್ತೇವೆ. ತೀರ ಸುರಕ್ಷಿತವಾ
ಉತ್ತಮ ಕಾರಿನ ಸುಖಾಸನದಲ್ಲಿ ಕೂತಿದ್ದರೂ ಅದು ಫಕ್ಕ
ಮಗ್ಗಲು ತಿರುಗುವಾಗ ನಾವು ಆಚೆ ಈಚೆ ಗಟ್ಟಿ ಹಿಡಿ
ಕೊಳ್ಳುತ್ತೇವೆ ! ಸಂಧಿ ಸಿಗದೆ ಸಂದಿಗುಂಪಾಗಿ ನವೆಯು
ಸದ್ಗುಣಿಗಳಿಗಾಗಿ ನಾವು ಹಳಹಳಿಸುವದಿಲ್ಲ. ಆದರೆ ಬಿ
ಬೇಡುವದನ್ನೇ ಕಸಬಾಗಿ ಮಾಡಿಕೊಂಡು ಬೀದಿಯಂಚಿ
ಕಾಲುಚಾಚಿ ಅಂಗಲಾಚಿ ಕೂತು ಕೂಗುವ ತಿರುಕನ ಎ

ಬಣ್ಣಗಳ ಕೊಳೆತ ಗಾಯದ ಮಾಯದ ಕಲೆಯನ್ನು ಕಂಡು ನಾವು ಕಳವಳಗೊಳ್ಳುತ್ತೇವೆ. ದೊಡ್ಡ ಅನ್ಯಾಯ ದಿಂದ ಆಗದಷ್ಟು ಭಾವೋದ್ರೇಕ, ಪಿತ್ತಪ್ರಕೋಪ, ಚಿಕ್ಕ ರಕ್ತಪಾತ ನೋಡಿ ನಮಗೆ ಆಗುತ್ತದೆ. ಉಪಹಾರಗೃಹದ ಪರಿಚಾರಕನಿಗೆ ಇನಾಮು ಕೊಡಲು ಮರೆತರೆ ನಮಗೆ ನಾಚಿಕೆ ಆಗುತ್ತದೆ. ಆದರೆ ನಮ್ಮ ಅಜ್ಞಾನ ಆಲಸ್ಯ ಅಸ ಡ್ಡಾಳತನಗಳಿಗಾಗಿ ನಮಗೆ ಏನೂ ಅನಿಸುವದಿಲ್ಲ. ನಾವು ರಕ್ಕಿಯನ್ನು ಕೊಲ್ಲುತ್ತೇವೆ. ಅದರ ಹರಿದು ಕೆದರಿದ ಗರಿಗಳಿಗಾಗಿ ಮರುಕ ಪಡುತ್ತೇವೆ. ಹೀಗಿದೆ ನಮ್ಮ ಪ್ರವೃತ್ತಿಜನ್ಯ ಅಂದರೆ ವಿಕಾರವಶ ಪ್ರತಿಕ್ರಿಯೆಗಳ ಲೀಲೆ !

ಇದರಿಂದ ಹೊರಡುವ ಹುರುಳೇನು ? ಪ್ರಾಥಮಿಕ ಪ್ರಾಕೃತಿಕ ಅವಸ್ಥೆಯಲ್ಲಿ ಕಾಡಾಡಿ ಬಾಳಿನ ಕೆಲಸ ಕೊರತೆ ಗಳ ಮಟ್ಟಿಗೆ ಮೂಲ ಪ್ರವೃತ್ತಿಗಳನ್ನು ನಂಬಿ ನಡೆಯುವ ಶೀಲ ಸಾಕಾಗಿತ್ತು. ಆದರೆ ಮನುಷ್ಯ ಹಿಂಸ್ರ ಕರ್ಮದಿಂದ ಕೃಷಿ ಧರ್ಮಕ್ಕೆ ಈಡಾದ. ಕಾಡಿನ ಒಂಟಿಬಾಳಿನಿಂದ ಕುಲಕೌಟುಂಬಿಕತೆಗೆ ಈಲಾದ. ಆಗ ಬದುಕಿನ ಕಟ್ಟು-ಕಟ್ಟು ಬೇರೆಯಾಗಬೇಕಾಯಿತು. ಬೇಟೆಯ ಬದುಕಿಗೆ ಪಳಗಿದ ನಮ್ಮ ಸಹಜ ಪ್ರವೃತ್ತಿಗಳು ಬೇಸಾಯದ ಬದುಕಿಗೆ ಸಾಲದಾದವು. ನಾಗರಿಕತೆಯ ಮಜಲಿಗೆ ಅವು ಇನ್ನೂ ಹಿಂದೆ ಬಿದ್ದವು. ಹೀಗೆ ಮಾನವ ಜೀವನದ ಉತ್ತರೋತ್ತ ರವೂ ಆಶೋತ್ತರವೂ ಬುದ್ಧಿಗೆ ಆಹ್ವಾನವಾಗಿದೆ.

ಮನುಷ್ಯಶಿಶುವಿನಲ್ಲಿ ಸಹಜ ಸಿದ್ಧ ಪ್ರತಿಕ್ರಿಯೆ

ಗಳ — ಅಂದರೆ ಮೂಲ ಪ್ರವೃತ್ತಿ ಪ್ರೇರಿತವಾದ ಜೀವನ
ವ್ಯಾಪಾರದ — ಅಪೂರ್ಣತೆ, ಅಪಕ್ವತೆ, ಅಪರ್ಯಾಪ್ತ
ಗಳು ತಾನೇ ತಾನಾಗಿರುತ್ತವೆ. ಶಿಶುವು ಅದೇ ಹುಟ್ಟಿ
ಪಶುವಿಗಿಂತ ಅಸಹಾಯತೆಯಲ್ಲಿ ಕನಿಷ್ಟವಿರುತ್ತದೆ. ಆದ
ಈ ಅಸಮರ್ಥತೆಯಲ್ಲಿಯೇ ಶಿಶುವಿನ ಸಾಮರ್ಥ್ಯದ ಬೀ
ವಿರುತ್ತದೆ. ಸಹಜ ಪ್ರವೃತ್ತಿಗಳ ಅಪೂರ್ಣತೆ-ಅಪರ್ಯಾ
ಪ್ತತೆಯಲ್ಲಿಯೇ ಮುಂದಿನ ಪ್ರಗತಿ-ಪ್ರಭುತ್ವಗಳ ಬೀ
ರುತ್ತದೆ. ಏಕೆಂದರೆ ಈ ಮೂಲಕವೇ ಶಿಶು ಪಶುಗ
ಮರಿಗಳಿಗಿಂತಲೂ ಅದೆಷ್ಟೋ ಪಟ್ಟು ಹೆಚ್ಚು ಸಂಸ್ಕಾರಕ್ಕೆ
ವಿಕಾಸಕ್ಕೆ, ಪರಿವರ್ತನೆಗೆ ಅನುಕೂಲವಾಗಿರುತ್ತದೆ
ಹಿಂದೊಂದು ಹಿಮಪ್ರಳಯಕ್ಕೂ ಹಿಂದಿನ ಕಾಲದಲ್ಲಿ ಪ್ರಚಂ
ದೇಹಿಗಳಾದ ಪ್ರಾಣಿಗಳು ಭೂಮಿಯನ್ನು ಆಕ್ರಮಿಸಿದ್ದವು
ಆದರೆ ಅವು ಕೇವಲ ಪರಿಸ್ಥಿತಿಗೆ ಕಟ್ಟುಬಿದ್ದ ಜಡ ಜೀ
ಗಳಾಗಿದ್ದವು. ಅವುಗಳ ಚಟುವಟಿಕೆಗಳ ಚಟಗಳು ಬ
ಲಾಗದಂಥವಿದ್ದುದರಿಂದಲೇ ಅವು ಅಳಿದು ಹೋದವು —
ಚಳಿಗೆ ಮುದುಡಿ ಮಡಿದು ಹೋದವು. ಆದರೆ ಇತ
ಸಸ್ತನವರ್ಗದ ಪ್ರಾಣಿಗಳೂ ಅವುಗಳಲ್ಲಿಯೂ ಹಿಂಗಾಲ
ಗಳ ಮೇಲೆ ಎದ್ದು ನಿಂತ ಮೂರು ಮೊಳದ ಮನುಷ್ಯನ
ತಾಳಿ ಬಾಳುವಂತಾಯಿತು.

ಈ ತಾಳಿಕೆ-ಬಾಳಿಕೆಯ ಪ್ರಯತ್ನ-ಪ್ರಯಾ
ಗಳಲ್ಲಿಯೇ ವಿಚಾರದ ಉಗಮ, ವಿಮರ್ಶೆಯ ಆರಂಭ
ವಿವೇಕದ ಉದಯವಾಗಿದೆ. ಪ್ರವೃತ್ತಿಯನ್ನೇ ಚಕಿತಗೊ

ಸಿದ ಮುಗ್ಗಟ್ಟಿನ ಮುಂದುಗಾಣದ ದಿಗಿಲಿನಲ್ಲಿಯೇ ಮಾನವನ ಮೊತ್ತ ಮೊದಲಿನ ತಾತ್ವಿಕ ಗ್ರಹಿಕೆ ಹೆದರುತ್ತ ಹುಟ್ಟಿಬಂದಿತು. ಒಂದಕ್ಕೆ ಒಂದು ಕೂಡಿಸಿದರೆ ಎರಡಾಗುವದೆಂಬ ನವೋನವವಾದ ನಂಬಿಗೆಯ ನೆಲೆಯು ಅಂದೇ ಹಾಕಲ್ಪಟ್ಟಿತು! ವಿಶೇಷದಿಂದ ಸಾಮಾನ್ಯ ಬೇಕಾಗತೊಡಗಿತು. ಸಂಬಂಧಗಳ ಅನುಕ್ರಮ ಅನುಮಾನಗಳು ಮೊದಲಾದವು. ದ್ರವ್ಯದಿಂದ ಗುಣ, ರೂಪದಿಂದ ನಾಮ, ಲಕ್ಷಣದಿಂದ ಜಾತಿ, ನಿಸರ್ಗದಲ್ಲಿ ನಿಯಮಿತತನ ಅದರ ಹಿಂದಿನ ಒಂದು ನಿಯತಿ ಇವುಗಳ ಆಕಲನೆಯು ಮಸುಮಸುಕಾಗಿ ನಸು ನಸುಕಾಗಿ ಆಕಾರಗೊಂಡಿತು. ಇದೇ ಬುದ್ಧಿ ಶಕ್ತಿಯ ಉಪಾಧಿ – ಉಪಕರಣಗಳು ರೂಪಗೊಂಡು ಬಂದ ಪರ್ವಕಾಲ.

ಹೊರ ಬೆರಗಿನ ವೈಚಿತ್ರ್ಯದ ನಿರೀಕ್ಷಣೆ ಬೇಟೆಯು ಭಕ್ಷ್ಯಕ್ಕಾಗಿ ಜರುಗುವ ಪ್ರತೀಕ್ಷೆ ಇವುಗಳಿಂದ ಅಭ್ಯಸ್ತವಾಗಿ ಅವಧಾನ ಏಕಾಗ್ರತೆ ಚಿತ್ತ ಶಕ್ತಿಗಳು ಪರಿಣಮಿಸಿದವು. ಕಾದಾಡುವ ಏರಿಹೋಗುವ ಪ್ರವೃತ್ತಿಯೇ ಕುತೂಹಲ ವಿಚಿಕಿತ್ಸೆಗಳ ವಿವೇಚಕ ವೃತ್ತಿಗೆ ಮಾರ್ಪಟ್ಟಿತು. ಯಾಂತ್ರಿಕ ಚಲನವಲನಗಳಿಂದ ಸಹೇತುಕ ಪ್ರಯೋಗ ವಿನಿಯೋಗ ಪದ್ಧತಿ ಹೆಜ್ಜೆಯೂರಿತು. ವಾನರ ನೀಟಾಗಿ ನಿಂತು ಕೈ ಬೀಸಿದಾಗ ತನ್ನ " ವಾ "ದ ಬಾಲ ಕಳೆದುಕೊಂಡು ನರನಾದ. ಅಂದರೆ ವನ್ಯತೆಯ ಸಾಮಾನ್ಯತೆಯ ಮಟ್ಟದೊಳಗಿಂದಲೇ ವ್ಯಕ್ತಿತ್ವದ ಧನ್ಯತೆಯ ಮಜಲು ಮೈವೆತ್ತಿತು.

ಸಾವಿರ ವಿಪತ್ತುಗಳಿಗೆ ತುತ್ತಾಗುತ್ತ, ಪ್ರತಿಕೂಲತೆ ಆವಶ್ಯಕತೆಗಳಿಗೆ ತೊತ್ತಾಗುತ್ತ ತನ್ನ ಎದೆಗಾರಿಕೆಗೆ ತಾನೇ ಬೆದರುತ್ತ ಆ ನರಪಶು ತನ್ನ ಬಾಳಿನ ಆಳಿಕೆ ತನ್ನ ಬಲಗೈಯ ಮುಷ್ಟಿಯಲ್ಲಿ — ಆ ಮುಷ್ಟಿಯನ್ನು ಬಿಗಿಯಲು ಬಿಡಿಸಲು ಎತ್ತಲು ಎಸೆಯಲು ಸೂಚಿಸುವ ಮೆದುಳಿನ ಕಸುವಿನಲ್ಲಿ ಇದೆಯೆಂಬುದನ್ನು ಕ್ರಮೇಣ ಕಂಡುಕೊಂಡನು.

ಹೀಗೆ ಹೊಗೆ – ಬೂದಿ – ಇಂಗಾಳಗಳೊಳಗಿಂದ ಕಿಡಿಕಿಚ್ಚು ಜ್ವಾಲೆ – ಜ್ಯೋತಿಗಳು ಉರಿದೇಳುವಂತೆ, ವನ್ಯ ಪ್ರವೃತ್ತಿಗಳ ಅಂಥ ತಮಸ್ಸಿನೊಳಗಿಂದ ಆರಂಭವಾಗಿ, ಬಾಳಿನ ಮೇಲು–ಮಿಗಿಲುಗಳ ಮುನ್ನಡೆಗೆ ಅವಲಂಬವಾಗಿ ಬುದ್ಧಿಯ ತೇಜಸ್ಸು ಮಾನವನ ಜೀವನ ಕಲಹದ ತಪಸ್ಸಿನಿಂದಾಗಿ ರೂಪಗೊಂಡು ಬಂದಿತು. ಅಂದರೇನು ? ಬುದ್ಧಿಯೂ ಮೂಲತಃ ಅಂಶತಃ ಪ್ರವೃತ್ತಿ ರೂಪವೇ ಆಗಿದೆ. ಬೇರಿನಿಂದ ಬೊಡ್ಡೆಯಿಂದ ಹೂವು ಹಣ್ಣು ಎಷ್ಟೇ ದೂರವಿರಲಿ, ಬೇರೆಯಾಗಿ ತೋರಲಿ — ಕೊನೆಗೂ, ಬುಡಕ್ಕೂ ಅವೆಲ್ಲ ಒಂದೇ ಮರ. ಬೇರಿನಿಂದ ಬಿಡುಗಡೆಯಾಗುವದರಲ್ಲಿ ಮರಕ್ಕೆ ಮುಕ್ತಿ ಇದೆಯೇ ? ಈಗಲೂ ತೀರ ಹೊಸತಾದ ಸನ್ನಿವೇಶ ಮುಂದೆ ಬಂದರೆ, ಅನುಭವ ಸಾಲದಿದ್ದಾಗ, ವಿಚಾರ ಸಾಗದಿದ್ದಾಗ, ಮೆದುಳಿಗೆ ಆಯಾಸವಾದಾಗ, ಮುಪ್ಪಿನಿಂದಲೋ, ಬೇನೆಯಿಂದಲೋ, ಭೀತಿಯಿಂದಲೋ, ದುಃಖದಿಂದಲೋ, ದೌರ್ಬಲ್ಯದಿಂದಲೋ, ಮಂಕು ಕವಿದಾಗ, ಮುಂದುಗಾಣದಾದಾಗ ಮಾನವನ ಬುದ್ಧಿ ಮೂಲ

ಪ್ರವೃತ್ತಿಯಿಂದಲೇ ಅನುಮಾನ ಕಟ್ಟುತ್ತದೆ, ನಿಧಾನಕ್ಕೆ ಮುಟ್ಟುತ್ತದೆ.

ಈ ಅನುಮಾನ-ನಿಧಾನಗಳ ಅವಕಾಶದಲ್ಲಿ ನಮ್ಮ ಮುಂದಿರುವ ಸಮಸ್ಯೆಯ ವಿವಿಧ ಮೊಗ-ಮಗ್ಗಲುಗಳು ಪ್ರತಿಯೊಂದೂ ತನ್ನ ತನ್ನ ಪ್ರಾಥಮಿಕ-ಅಂದರೆ ಮೂಲ ಪ್ರವೃತ್ತಿಗನುಸಾರವಾದ – ಪ್ರತಿಕ್ರಿಯೆ ನಮ್ಮಲ್ಲಿ ಪ್ರೇರಿಸುತ್ತದೆ. ಅವೆಲ್ಲವುಗಳ ಸಂಯುಕ್ತ ಸಮಗ್ರ ಪರಿಣಾಮವಾಗಿ ಆ ಸಮಸ್ಯೆಯ ಆದಷ್ಟು ಸಂಪೂರ್ಣ ಗ್ರಹಿಕೆಗೆ ಸಮರ್ಪಕವಾದ ಸಂಕೀರ್ಣ ಪ್ರತಿಕ್ರಿಯೆಯೊಂದು ನಮ್ಮಲ್ಲಿ ಒಡಮೂಡುತ್ತದೆ. ಇದಕ್ಕೇ ನಾವು ಬೌದ್ಧಿಕ ಚಟುವಟಿಕೆ, ಬುದ್ಧಿಯ ವ್ಯವಸಾಯವೆನ್ನುವದು.

## ೧೬. ಬುದ್ಧಿಯ ಸ್ವರೂಪ ಮತ್ತು ಕಾರ್ಯ

ಪ್ರಾಣದ ಅನ್ನಮಯತೆ, ಪಶುವಿನ ಮನೋಮಯತೆ, ಮನುಷ್ಯನ ವಿಜ್ಞಾನಮಯತೆ ಇವೆಲ್ಲವುಗಳಲ್ಲಿಯೂ ಜೀವದ ಅಖಂಡತೆ – ಸಾತತ್ಯಗಳು ಅನುಸ್ಯೂತವಾಗಿವೆ. ಈ ತತ್ತ್ವದಂತೆಯೇ ಬುದ್ಧಿಯ ಸ್ವರೂಪ ಮತ್ತು ಕಾರ್ಯದ ವ್ಯಾಖ್ಯೆ ಸಿಗಬೇಕು. ಅದು ಹೇಗೆ ?

ಪ್ರಾಣಕ್ಕೆ ಪರಾವರ್ತನ – ಇಲ್ಲವೆ ಪ್ರತಿಕ್ಷಿಪ್ತ ಕ್ರಿಯೆ ಇದೆ; ಪಶುವಿಗೆ ಪ್ರವೃತ್ತಿಗಳ ಪ್ರತಿಕ್ರಿಯೆ ಇದೆ; ಅದು

ತಾತ್ಕಾಲಿಕ, ಇದು ತಾತ್ಪೂರ್ತಿಕ. ಮನುಷ್ಯನಿಗೆ ಪ್ರಜ್ಞೆ
ವಿಚಾರ ವ್ಯಾಪಾರವಿದೆ. ಆದರೆ ಈ ಮೂರೂ ಮೂ
ಏಕ ಸೂತ್ರವಾಗಿವೆ. ಪ್ರತಿಕ್ಷಿಪ್ತ – ಪರಾವರ್ತನ ಕ್ರಿ
ಯೆಂದರೆ, ಸ್ಥಾನಿಕ ಕ್ಷಣಿಕ ಪ್ರಚೋದನೆಗೆ ಪ್ರಾಣಿಯಿ
ಜರುಗುವ ಸ್ಥಾನಿಕ ಮತ್ತು ಕ್ಷಣಿಕ ಪ್ರತಿಕ್ರಿಯೆ. ಪ್ರ
ಪ್ರತಿಕ್ರಿಯೆಯೆಂದರೆ ಒಂದು ಸನ್ನಿವೇಶದೊಳಗಿನ ಯಾ
ಅಂಶವನ್ನು ಕುರಿತು ಪ್ರಾಣಿಯಿಂದ ಜರುಗುವ ಸಾಮ
ವಾದ ಆನುವಂಶಿಕವಾದ ಶಾಶ್ವತ ಪ್ರತಿಕ್ರಿಯೆ. ಅ
ಪ್ರಸಂಗ ಬಂದಾಗೆಲ್ಲ ಅಂಥ ಕ್ರಿಯೆ ನಡೆಯುವಂತಹ
ಬುದ್ಧಿಯ ವ್ಯಾಪಾರವೆಂದರೆ, ವಿಚಾರ ಪ್ರಕ್ರಿಯೆಯೆಂ
ಸಮಗ್ರ ಸನ್ನಿವೇಶವನ್ನು ಸಂಗ್ರಹವಾಗಿ ಗ್ರಹಿಸಿ ಅ
ಯೋಗ್ಯವಾದ ಆದಷ್ಟು ಸಮರ್ಪಕವಾದ ಪ್ರತಿಕ್ರಿ
ಪ್ರಕಟಿಸುವದು. ಹೀಗೆ **ಪ್ರವೃತ್ತಿ ಮತ್ತು ಬುದ್ಧಿ**
**ನಡುವೆ ಜಾತಿಭೇದವಿಲ್ಲ. ಮಾತ್ರೆಯ ಭೇದ,**
**ಗತಿಯ ತಾರತಮ್ಯ.** ಅವೆರಡರ ಅಂತರ ಗುಣಕ್ರಿ
ಪರಿಮಾಣವನ್ನೆ ಹೊಂದಿದೆ. ಪ್ರವೃತ್ತಿಯು ಬುದ್ಧಿಯ
ಸಾಯಕ್ಕಾಗಿ ವಿಷಯವನ್ನೂ ವಿವರಗಳನ್ನೂ ಒದಗಿಸುತ್ತ
ಆ ವಿವರಗಳ ಪ್ರೇರಣೆಗಳ ತಿಕ್ಕಾಟದಲ್ಲಿ ಒಂದನ್ನು ಗೊ
ಪಡಿಸಬೇಕಾಗುವ ಇರುಕಿನಲ್ಲಿ ಒದಗುವ ತಿಳುವಳಿಕೆ
ತೂಗುಯ್ಯಾಲೆಯೇ ವಿಮರ್ಶೆ – ಪರ್ಯಾಲೋಚನೆ
ಪೀಠ. ಒಂದು ಸನ್ನಿವೇಶವನ್ನೂ, ಒಂದು ಸಮಸ್ಯೆಯ
ಅದರ ಘಟಕಾಂಶಗಳಲ್ಲಿ ವಿಂಗಡಿಸಿ ಅದಕ್ಕೆ ತಕ್ಕುದ
ಪ್ರತಿಕ್ರಿಯೆಯ ಪರಿಪೂರ್ಣತೆಯನ್ನು ಸಾಧಿಸುವ ಸಿದ್ಧತೆ

ವಿಚಾರ ಪ್ರಕ್ರಿಯೆ. ಒಂದು ಮಾತಿನಲ್ಲಿ ಹೇಳುವದಾದರೆ, **ಪ್ರಚೋದನೆಯ ವಿಶ್ಲೇಷಣ - ಪೃಥಃಕರಣವೂ ಪ್ರತಿಕ್ರಿಯೆಯ ಸಮನ್ವಯ ಸಮೀಕರಣವೂ ಕೂಡಿಯೇ ಬುದ್ಧಿಯೆನಿಸಿಕೊಳ್ಳುತ್ತದೆ.** ಬೆಟ್ಟದೊಳಗಿಂದ ಹೋಗುವಾಗ ಆ ಹಳೆ ಕತೆಯಲ್ಲಿಯ ಠಕ್ಕ ಗೆಳೆಯ ಕರಡಿಯನ್ನು ಕಂಡು ಥಟ್ಟನೆ ಮರವೇರಿ ಕುಳಿತ; ಆದರೆ ದಾರಿಯಲ್ಲಿ ದಿಕ್ಕುಗಾಣದೆ ನಿಂತ ಆತನ ಜತೆಗಾರ ಕರಡಿಯ ಎದುರಿಗೆ ಏನು ಮಾಡಬೇಕು ? ಕಾಲು ಕೀಳಬೇಕು; ಕರಡಿಯ ಗುದುಮುರಿಗೆಗೆ ಗುರಿಯಾಗಬೇಕು; ಇಲ್ಲವೆ ಅದಕೊಡನೆ ಗುದ್ದಾಡಬೇಕು. — ಅಥವಾ ? ಆತ ಧಿಗನೆ ನೆಲಕ್ಕೆ ಒರಗಿದ. ಸತ್ತಂತೆ ನಟಿಸಿದ. ಪ್ರತಿಕ್ರಿಯೆಯ ಅದೂ ಒಟ್ಟು ಸಮರ್ಪಕವಾಗುವ ಪ್ರತಿಕ್ರಿಯೆಯ — ಆಯ್ಕೆಯೆ ಬುದ್ಧಿಯ ಕಾರ್ಯ !

ಸೃಷ್ಟಿಯಲ್ಲಿ ಶಕ್ತಿ ಮತ್ತು ಕ್ರಿಯೆ ಇವೆರಡೂ ಅವಿಭಾಜ್ಯವಾಗಿ ಅನ್ಯೋನ್ಯವಾಗಿ ಐಕ್ಯವಾಗಿವೆ. ಕ್ರಿಯೆಯ ಶಕ್ಯತೆಯೇ ಶಕ್ತಿ. ಶಕ್ತಿಯ ಅಭಿವ್ಯಕ್ತಿಯೇ ಕ್ರಿಯೆ. ಬುದ್ಧಿಯ ಬಗೆಯೂ ಅದೇ. ಬುದ್ಧಿಯ ಕಾರ್ಯದಲ್ಲಿಯೇ ಅದರ ಸ್ವರೂಪ, ಸ್ವರೂಪದಲ್ಲಿಯೇ ಅದರ ಕಾರ್ಯ ನಾವು ಕಂಡುಕೊಳ್ಳಬೇಕೆಂಬುದೇ ಮೇಲಿನ ಮೀಮಾಂಸೆಯ ಮರ್ಮ.

ಪ್ರವೃತ್ತಿಗಳ — ಒಳಪ್ರೇರಣೆಗಳ ಬಾಳು ಹೆಚ್ಚು

ಸರಳ, ಅನೇಕಸಲ ಹೆಚ್ಚು ಸಮರ್ಪಕ. ಆದರೆ ಅದನ್ನು ನಾವು ಹಿಂದೆಯೇ ನಮ್ಮ ಬೇಟೆ–ಬೆಟ್ಟಗಳ ಬದುಕಿನ ಸಂಗಾತಿಗಳಾಗಿದ್ದ ಪಶುಗಳ ಪಾಲಿಗೆ ಬಿಟ್ಟು ನಮ್ಮ ಪಾಡನ್ನು ಬುದ್ಧಿಯ “ ಉರಿದಾರಿ ”ಯಲ್ಲಿ ಕಂಡುಕೊಂಡು ಎಂದೋ ಮುಂದುವರಿದು ಬಂದಿದ್ದೇವೆ. ಇನ್ನು ಹಿನ್ನೋಟ ಹಿನ್ನಡೆ ಶಕ್ಯವಿಲ್ಲ; ಇಂದು ಅಂತಃಪ್ರೇರಣೆಯ ವಿಲಾಸವನ್ನು – ಕಾಯೆಯಲ್ಲಿ ಛಾಯೆ, ಛಾಯೆಯಲ್ಲಿ ಮಾಯೆ ಕಾಣುವ “ ಕಣ್ಕಟ್ಟ ”ನ್ನು ಅಂತಃಪುರದ ಸಾಧಕರಿಗಾಗಿ ಬಿಟ್ಟು ಬಿಡೋಣ. ನಮ್ಮ ಮಟ್ಟಿಗೆ ತಿಳುವಳಿಕೆಯ ತ್ರಾಣ ಮಾತ್ರ ಇದ್ದರೆ ಸಾಕು. ಬುದ್ಧಿಯ ಕ್ರಿಯೆ ವೇಗದ್ದಲ್ಲ, ವಿಲಂಬದ್ದು. ಈ ವಿಲಂಬದಲ್ಲಿಯೇ ಅದರ ವೈಗುಣ್ಯವಿದೆ. ಆದರೂ ಮನುಷ್ಯನಿಗೆ ಬುದ್ಧಿಯಲ್ಲದೆ ಬೇರೆ ವಿಧಿಯಿಲ್ಲ. ಮನುಷ್ಯನ ಮಟ್ಟಿಗೆ ಆ ಮೂಲಪ್ರವೃತ್ತಿಗಳ ಬದುಕು — ಅದೇರೀತಿ “ ಒಳದನಿ ” ಅಂತಃಪ್ರೇರಣೆಗಳೆಂಬುದರ ಬದುಕೂ — ಎಷ್ಟೇ ಅಗಮ್ಯ - ರಮ್ಯವೆನಿಸಿದರೂ, ಅಸಿದ್ಧ, ಅಸಂಬದ್ಧ, ಅತಿ ಸಂದಿಗ್ಧ; ಆದ್ದರಿಂದ ಅಸಮರ್ಥ ಮತ್ತು ಅಸಮರ್ಥ ನೀಯ. ಬುದ್ಧಿಪೂರ್ವಕತೆಯ ಬಾಳು ನಮ್ಮದಿರಲಿ. ಮೋಹದಿಂದ ಸತ್ಯಕ್ಕೆ, ಪ್ರಿಯದಿಂದ ಹಿತಕ್ಕೆ, ಭಯದಿಂದ ಭದ್ರತೆಗೆ, ಕ್ಷೋಭದಿಂದ ಕ್ಷೇಮಕ್ಕೆ, ನಿಸರ್ಗದಿಂದ ನಾಗರಿ ಕತೆಗೆ ಒಯ್ಯುವ ದಾರಿ ಅದೊಂದೇ. ಮನುಷ್ಯ ಪಶುವಿ ನಿಂದ ತೀರ ತುಸುವೇ ಅಂಶದಲ್ಲಿ ಬೇರೆಯಾಗಿದ್ದಾನೆ. ಆ ಅಷ್ಟು ತುಸು ಅಂಶವನ್ನೂ ನಾವು ಬಿಸುಟು ಬಿಡುತ್ತೇವೆ! “ ಕಿಂ ಆಶ್ಚರ್ಯಂ ಅತಃಪರಂ ” ?

## ೧೭. ಸತ್ಯದ ಪ್ರಮಾಣಗಳು ಯಾವವು?

ಹಾಗಿದ್ದರೆ ಬುದ್ಧಿಪೂರ್ವಕವಾದ ಬಾಳಿನ ಬಗೆ ಯೇನು ? ಅದಕ್ಕೇ ಬುದ್ಧಿ ಪ್ರಾಮಾಣ್ಯವೆನ್ನುತ್ತಾರೆ. ಅದೇ ವಿಚಾರವಾದದ ಪ್ರತಿಜ್ಞೆ, — ತರ್ಕಶುದ್ಧವಾದ ಪ್ರಜ್ಞೆ. ಜಗತ್ತಿನ, ಇತಿಹಾಸದ ಸಂಸ್ಕೃತಿಯ, ದೇಶಕಾಲ ಪರಿಸ್ಥಿತಿಯ, ಸಮಾಜದ ಕುಲದ ಹಾಗೂ ಆವರಣದ ಒಂದು ಸಂದರ್ಭದ ನಡುವೆ ಪೂರ್ವಾಪರ ಸಂದರ್ಭ ಗೊತ್ತಿರದೆ ನಮ್ಮ ಬಾಳು ಒದಗಿಬರುತ್ತದೆ. ಇಂಥ ಪರಿಸ್ಥಿತಿಗೆ ನಮ್ಮ ಬಾಳಿನ ಮೊದಲನೆಯ ಪ್ರತಿಕ್ರಿಯೆ ಆಶ್ಚರ್ಯ—ಬೆರಗು. ಆ ಬೆರಗಿನ ಬೆನ್ನಿಗೆ ಬರುವದು ಸಂದೇಹ - ಭಯ - ಸಂಶಯ. ಅವುಗಳ ನಿವಾರಣೆಯಲ್ಲಿಯೇ ನಮ್ಮ ಶಕ್ತಿ, ಭವಿಷ್ಯದ ಶಕ್ಯತೆ. “ ಸಂಶಯಾತ್ಮಾ ವಿನಶ್ಯತಿ ” ಎಂಬುದರ ಅರ್ಥ ಸಂಶಯವನ್ನೇ ಮಾಡಬಾರದೆಂದಲ್ಲ, ಸಂಶಯದಲ್ಲಿಯೇ ಸದಾಕಾಲವೂ ಉಳಿಯಬಾರದೆಂದು. ಬರೇ ವಿಕಲ್ಪ ಸಂದೇಹ ಹುಟ್ಟಿಸುವದು ಬುದ್ಧಿಭೇದ, ಬುದ್ಧಿವಾದವಲ್ಲ. ಕಾರ್ಯದ ಕಾರಣವನ್ನೂ ಒಂದಕ್ಕೊಂದು ಅಂಟಿದ ಸಂಬಂಧವನ್ನೂ, ಸಾಮ್ಯ ವೈಷಮ್ಯಗಳನ್ನೂ, ಭೇದಾಭೇದಗಳನ್ನೂ, ತಾರತಮ್ಯಗಳನ್ನೂ ಗುರುತಿಸಿ ಗಮನಿಸಿ ಗಳಿಸುವ ತಿಳುವಳಿಕೆಯೇ ನಮ್ಮ ಬಾಳಿನ ಆನುಗೋಲು, ಪ್ರಗತಿಯ ಅಳತೆಗೋಲು. ಸಂದೇಹದ ಹೊಟ್ಟೆಯಲ್ಲಿ ಜಿಜ್ಞಾಸೆ ಹುಟ್ಟಬೇಕು. ಬೆರಗಿನಿಂದ ಬೆಳಕು, ಬೆಳಕಿನಿಂದ ಬದುಕು. ನಮ್ಮ ಬದುಕಿನಮೇಲೆ ಬುದ್ಧಿಯ

ಪ್ರಭಾವವಷ್ಟೇ ಬಿದ್ದರೆ ಸಾಲದು, ಅದರ ಪ್ರಭ
ಸ್ಥಾಪಿತವಾಗಬೇಕು.

ಅದಕ್ಕಾಗಿ ಏನು ಮಾಡಬೇಕು ? ನಮ್ಮ ಪ್ರಾಚೀ
ದಾರ್ಶನಿಕರು ಸತ್ಯದ ನಿದರ್ಶನಕ್ಕಾಗಿ ನಾಲ್ಕು ಪ್ರಮಾ
ಗಳನ್ನು ಹೇಳಿದರು — **ಪ್ರತ್ಯಕ್ಷ, ಉಪಮಾನ, ಅ**
**ಮಾನ,** ಮತ್ತು **ಶಾಬ್ದ.** ಕಣ್ಣಾರೆ ಕಂಡದ್ದು **ಪ್ರತ್ಯ**
ಪ್ರಮಾಣ. "ನಾನು ನನ್ನ ಮೂಗಿನ ಸೇರಕ್ಕೇ ನಡೆಂ
ವಾತ"; "ಕಂಡದ್ದನ್ನಷ್ಟೇ ನಂಬುವವ" — ಎನ್ನುವ
ಇದರ ವಾದ. ಸಾಮಾನ್ಯವಾಗಿ ಆಧುನಿಕ ವಿಜ್ಞಾನದ
ಗಲ್ಲು ಈ ಪ್ರತ್ಯಕ್ಷವಾದವೇ. ಇಲ್ಲಿ ಪ್ರತ್ಯಕ್ಷವಾಗಿ ನೋ
ನಡೆಯಿಸಿದ ಪ್ರಯೋಗ - ಪ್ರಯತ್ನಗಳಿಗೆ ಪ್ರಾಶಸ್
ಆದರೆ ನಮ್ಮ ಬದುಕಿನಲ್ಲಿ ಎಲ್ಲರೂ ಎಲ್ಲವನ್ನೂ ನೋಡಿ
ನಂಬುವದು ಶಕ್ಯವೇ ಇಲ್ಲ. ಸೃಷ್ಟಿ ಅನಂತಪಾರ; ದೃ
ಪರಿಮಿತ; ನಿಯಮಿತ. ಇಷ್ಟೇ ಅಲ್ಲ ನಮ್ಮ ದೃ
ದುರ್ಬಲ, ದೋಷಪೂರಿತ. ಎಷ್ಟೋಸಲ ನೋಡಿದ್ದ
ನಿಜವಿರುವದಿಲ್ಲ. ಎಷ್ಟೋಸಲ ಕಣ್ಣನ್ನು ಕಿವಿ ನಂಬ
ಕಿವಿಯನ್ನು ಕಣ್ಣು ನಂಬದು. ಕಂಡದ್ದು ಕಂಡಂತೆ ಇರು
ದಿಲ್ಲ. ಒಬ್ಬರು ಕಂಡಂತೆ ಇನ್ನೊಬ್ಬರಿಗೆ ಕಾಣುವದಿ
ಒಂದೇ ಸಂಗತಿ ಮೂರು ಜನ ಮೂರು ರೀತಿ ಕಾಣುತ್ತಾ
ಸರ್ ವಾಲ್ಟರ ರೇಲೆಯ ಆ ಕತೆ ಪ್ರಸಿದ್ಧವಿದೆ.
"ಲಂಡನ್ ಟಾವರಿ"ನ ತನ್ನ ಸೆರೆಮನೆಯಲ್ಲಿ ಕೂ
ಜಗತ್ತಿನ ಇತಿಹಾಸ ಬರೆಯ ತೊಡಗಿದ. ಒಂದು

ಹೊರಗೆ ಬೀದಿಯಲ್ಲಿ ಏನೋ ಗಲಭೆ ಎದ್ದ ಸದ್ದು ಕೇಳಿದ. ಸಮಾಚಾರವೇನೆಂದು ತಿಳಿಯಲು ಕಾವಲುಗಾರರನ್ನು ಕಳುಹಿಸಿ ಕರೆಯಿಸಿ ಕೇಳಿದ. ಆದರೇನು ? ಒಬ್ಬರು ತಂದ ಸಮಾಚಾರ ಇನ್ನೊಬ್ಬರು ತಂದಂತೆ ಇದ್ದಿಲ್ಲ. ಮತ್ತೆ ಪ್ರತಿ ರೊಬ್ಬರೂ ಕಣ್ಣ ಮುಂದೆ ಕಣ್ಣಾರೆ ಕಂಡದ್ದೇ ! ರೇಲೆಗೆ ತುಂಬ ಬೇಸರವಾಯಿತು. ಪ್ರತ್ಯಕ್ಷ ಕಂಡದ್ದನ್ನು ಅರಹುವಾಗ ಇಷ್ಟೊಂದು ವಿವಿಧತೆ – ವಿಸಂಗತಿ. ಅಂಥಲ್ಲಿ ನೂರಾರು ವರ್ಷಗಳ ಹಿಂದಿನ, ಬರೆದಿಟ್ಟ ವಿಷಯಗಳನ್ನು ಸತ್ಯವೆಂದು ನಂಬುವದೆಂತು ? ಆತ ತಲೆ ಕಾದು ತಾನು ಬರೆಯುತ್ತಿದ್ದ ಇತಿಹಾಸದ ಕರಡನ್ನೇ ಸುಟ್ಟುಬಿಟ್ಟನಂತೆ ! ಈ ಕತೆ ನಿಜವಿರಲಿ, ಇಲ್ಲದಿರಲಿ, ಇದರ ತಥ್ಯ ಪೂರ್ತಿ ನಿಜ.

ಹೀಗೆ ಪ್ರತ್ಯಕ್ಷ ಒಂದೇ ಸಾಲದು. ಅನಂತರ ನಾವೆಲ್ಲ ಅನುಸರಿಸುವ ಕ್ರಮ **ಉಪಮಾನದ್ದು**. ಅಂದರೆ ಇದೂ ಪ್ರತ್ಯಕ್ಷದ್ದೇ ಒಂದು ರೀತಿ ವಿನಿಮಯ. ಇದು ಅದರಂತೆ; ಈ ಅನುಭವ ಆ ಅನುಭವದಂತೆ; ಹಾವು ಹಗ್ಗದಂತೆ; ದೇವರು ತಂದೆಯಂತೆ — ಇತ್ಯಾದಿ, ಇತ್ಯಾದಿ. ಆದರೆ ಸತ್ಯದ ಸರಿಯಾದ ಗ್ರಹಿಕೆಗೆ ಉಪಮಾನ ಯಾತಕ್ಕೂ ಸಾಲದು. ಎಲ್ಲಿ ನೇರವಾದ ವಿವರಣೆ ವಿಚಾರ ಕಷ್ಟವೋ ಅಲ್ಲಿ ಉಪಮಾನ ಮುಂದಾಗುತ್ತದೆ ಈಗಲೂ ಅಣು ರಚನೆಯ ವಿವರಣೆಗೆ ನಾವು ಉಪಮಾನವನ್ನೇ ಆಶ್ರಯಿಸುತ್ತೇವೆ. ಆದರೆ ಉಪಮಾನ ಎಷ್ಟೇ ಉಚಿತವೆನಿಸಿದರೂ ಸತ್ಯವನ್ನೂ ಯಥಾರ್ಥತೆಯನ್ನೂ ಸಿದ್ಧಮಾಡುವದರಲ್ಲಿ

ಅಷ್ಟೊಂದು ಯೋಗ್ಯ ಇಲ್ಲವೆ ಸಾಧು ಸಾಧನವಲ್ಲ. ಇನ
ಎಲ್ಲಿ ಪ್ರತ್ಯಕ್ಷ ಮತ್ತು ಉಪಮಾನಗಳು ಸಾಕಾಗುವದಿಲ್ಲವೊ
ಶಕ್ಯವಾಗುವದಿಲ್ಲವೋ ಅಂಥಲ್ಲಿ ಇರುವ ಪ್ರಮಾಣಗ
ಅನುಮಾನ ಮತ್ತು ಶಬ್ದ. ಇವೆರಡರಲ್ಲಿ ಮೊದಲಿಗೆ **ಶಾ**
ವನ್ನೇ ತೆಗೆದುಕೊಳ್ಳೋಣ. ಶಾಬ್ದವೆಂದರೆ ಇತರರಿಂ
ನಾವು ಕೇಳಿದ್ದು — ಇದನ್ನೆ **ಆಪ್ತವಾಕ್ಯ**ವೆನ್ನುವರ
ನಮ್ಮ ಹಿರಿಯರು, ಹಳಬರು, ಹಿತದವರು, ಹೆಚ್ಚು ಬ
ವರು, " ಇದು ಹೀಗೆ: ಅದು ಹಾಗೆ ಅಲ್ಲ " ಎಂತೆಲ್ಲ ಹೇಳಿ
ಬರೆದಿಟ್ಟ ಮಾತುಗಳು; ಮತಗಳು ಶಬ್ದಪ್ರಮಾಣವ
ಸುವವು. ವೇದ, ಪುರಾಣ, ಕುರಾನ, ಬೈಬಲ್ಲು, ಅವೆಸ್ತ
ಭಗವದ್ಗೀತೆ — ಇತ್ಯಾದಿಗಳೆಲ್ಲ ಶಬ್ದಪ್ರಮಾಣಗಳು. ಅ
ಗಳಲ್ಲಿ ಬರುವ ವಿಧಿ-ನಿಷೇಧ ನಮಗೆ ಶಿರಸಾವಮಾನ
ಅದೇರೀತಿ ಧರ್ಮದಿಂದ ಹೊರತಾದ ಕ್ಷೇತ್ರಗಳಲ್ಲಿಯ
ನಮಗೆ ಆಯಾ ವಿಷಯದ ವಿದ್ಯೆಯ ತಜ್ಞರ ಅಭಿಪ್ರಾ
ಗ್ರಾಹ್ಯ ಮತ್ತು ಮಾನ್ಯ. ಇದೆಲ್ಲವೂ ಆಪ್ತವಾ
ಪ್ರಾಮಾಣ್ಯವೇ !

ಆದರೆ ಇವೆಲ್ಲವನ್ನೂ ಮೀರಿ ನಿಂತ ಒಂದೇ ಒಂ
ಪ್ರಮಾಣ — **ಅನುಮಾನ.** ಅನುಮಾನವೆಂದರೆ ವಿಚಾ
ದಿಂದ ಸಿದ್ಧಾಂತಕ್ಕೆ, ತರ್ಕದಿಂದ ನಿರ್ಣಯಕ್ಕೆ ಮುಟ್ಟು
ಪದ್ಧತಿ – ಬೌದ್ಧಿಕ ಚಟುವಟಿಕೆ. ಮಿಕ್ಕ ಎಲ್ಲ ಪ್ರಮಾ
ಗಳೂ ನಡೆಯದಿದ್ದಾಗ, ಅವುಗಳಲ್ಲಿಯೇ ಹೊಂದಿಕೆ ಇ
ದಿರುವಾಗ ನಾವು ಶರಣು ಹೋಗುವದು ಅನುಮಾನಕ್ಕೆ

ಇದ್ದುದರಿಂದ ಇಲ್ಲದಿದ್ದುದನ್ನು, ಆದದ್ದನ್ನು, ಆಗಬೇಕಾದುದನ್ನು ತರ್ಕಿಸುವದು, ಊಹಿಸುವದು ಅನುಮಾನ. ಹೊಗೆ ಇದ್ದಲ್ಲಿ ಬೆಂಕಿ, ತೇವಿದ್ದಲ್ಲಿ ನೀರು, ಹೂವಿನಿಂದ ಬಳ್ಳಿ, ಗಡಿಗೆಯಿಂದ ಕುಂಬಾರ, — ಕಾರ್ಯದಿಂದ ಕಾರಣ, ಅಂಶದಿಂದ ಪೂರ್ಣ, ಗುಣದಿಂದ ಜಾತಿ, ವಿಶೇಷದಿಂದ ಸಾಮಾನ್ಯ, — ಇತ್ಯಾದಿ ಗುರುತಿಸುವ, ಗಮನಿಸುವ, ಗೊತ್ತುಪಡಿಸುವ ಚಟುವಟಿಕೆ ಅನುಮಾನ. ಜ್ಞಾತದಿಂದ ಅಜ್ಞಾತಕ್ಕೆ ಒಯ್ಯುವ ಮಾನಸಿಕ ಸೇತುವೆಯಿದು. ವಸ್ತು-ವಸ್ತುಗಳ ನಡುವಿನ ಭೇದ ಮತ್ತು ಅಭೇದ ಇವುಗಳ ತಿಳುವಳಿಕೆಗೆ ಅನುಮಾನವೇ ಕೈದೀವಟಿಗೆ. ವಿಚಾರದ ಜಾಗೃತಿ, ಪ್ರಗತಿ ಮತ್ತು ಸಂಸ್ಕೃತಿ ಇದೊಂದೇ ಆಧಾರದಿಂದ. ತೋರಿಕೆಯಿಂದ ಇರುವಿಕೆ, ಇರುವಿಕೆಯಿಂದ ಅನಿಸಿಕೆ, ಅನಿಸಿಕೆಯಿಂದ ನೆನಸಿಕೆ, ಇವುಗಳನ್ನು ವಿಂಗಡಿಸುವ ಹಂಚಿಕೆ ಅನುಮಾನದ್ದು. ಘಟನೆಯ ಹಿಂದಿನ ಸತ್ಯ, ವಿಶೇಷತೆಯ ಒಳಗಿನ ಸಾಮಾನ್ಯತೆ, ಅರ್ಥದಾಚೆಯ ಮರ್ಮ, ಕ್ರಿಯೆಗಳ ತಳದ ಧರ್ಮ ಇವನ್ನು ಊಹಿಸುವ ಉಪಾಯ ಅನುಮಾನದ್ದು.

## ೧೮. ಪ್ರಮಾಣಗಳಿಗೂ ಪ್ರಮಾಣ — ಅನುಮಾನ !

ನಿಜವಾಗಿ ನೋಡಿದರೆ, ಮಿಕ್ಕ ಮೂರು ಪ್ರಮಾಣಗಳಿಗೂ ಪ್ರಮಾಣವಾಗಿದೆ ಈ ಅನುಮಾನ. ಕಂಡದ್ದನ್ನು

ನಿಜವೆಂದು ನಂಬುವಾಗಲೂ ಅನುಮಾನದ ಕ್ರಿಯೆ ಶೀಘ್ರ
ವಾಗಿ ಸಂಕ್ಷಿಪ್ತವಾಗಿ ನಡೆದು ಹೋಗುತ್ತದೆ. ಇಲ್ಲವಾದರೆ,
ಕಾಣುವವನ ಗತಿ ಆನೆ ನೋಡಲು ಹೋದ ಆರು ಕುರುಡರ
ಅವಸ್ಥೆಯಾದೀತು ! ಪ್ರತ್ಯಕ್ಷವೆಂದರೇನು ? ಕೇವಲ ನಮ್ಮ
ಎರಡು ಕಣ್ಣುಗಳಿಗೆ ಗೋಚರವಾದದ್ದು ಮಾತ್ರವೇ
ಅಲ್ಲ. " ಹೊಳೆದದ್ದೆಲ್ಲ ಹೊನ್ನಲ್ಲ " ವೆಂದು ನಾವು ಹೇಳು
ವಾಗ ಕಣ್ಣಿನ ಸಾಕ್ಷಿಗೆ ಇತರ ಇಂದ್ರಿಯಗಳ ಸಾಕ್ಷಿ
ಹೊಂದಿಸಿ, ಹೋಲಿಸಿ ನೋಡುತ್ತೇವೆ. ಅವೆಲ್ಲವುಗಳ
ಒಟ್ಟು ಸಂಗತಿ – ಸುಸಂಗತಿ – ಆದರೇನೆ ನಾವು ಆ
ಸಂಗತಿ ಸತ್ಯವೆಂದು ನಂಬುತ್ತೇವೆ. ಅಂದರೇನು ?
" ಪ್ರತ್ಯಕ್ಷ ಕಂಡರೂ ಪರಾಂಬರಿಸಿ ನೋಡಬೇಕು " —
ಎಂಬ ಹಳಬರ ಮಾತು ಅನುಮಾನದ ಮೇಲ್ಮೆಯನ್ನೇ
ಸಿದ್ಧಮಾಡುತ್ತದೆ. ಉಪಮಾನದ ಔಚಿತ್ಯಕ್ಕೆ ಅಂತೂ
ಅನುಮಾನವು ಅಗತ್ಯ. ಉಪಮಾನದ ತಳಹದಿಯೇ
ಕಂಡಿದ್ದ – ಕಂಡಿರದ, ಪ್ರಸ್ತುತ – ಅಪ್ರಸ್ತುತ ಇವುಗಳ
ಒಳಗಿನ ಸಾಧರ್ಮ್ಯ, ಇಲ್ಲವೆ ಸಮಾನಧರ್ಮ. ಅದನ್ನು
ಅರಿಯಲು ಊಹೆಯೇ ಬೇಕು. ಅದೇ ಅನುಮಾನ
ಅದೇ ಕತೆ ಶಬ್ದ ಪ್ರಾಮಾಣ್ಯದ್ದು. ಆಪ್ತರ ಮಾತು ನಂಬ
ಬೇಕು ನಿಜ. ಆದರೆ ಆಪ್ತರು ಯಾರು ? ಒಂದಕ್ಕಿಂತ
ಹೆಚ್ಚು ಆಪ್ತ–ವಾಕ್ಯಗಳು ಎದುರಾದರೆ ಮುಂದೆ ಗತಿ
ಏನು ? " ನೈಕೋ ಋಷಿಃ ಯಸ್ಯ ವಚಃ ಪ್ರಮಾಣಂ "
ಈ ಶ್ರುತಿಬೇರೆ, ಸ್ಮೃತಿಬೇರೆ, ಪುರಾಣಬೇರೆ. ಒಬ್ಬ
ಆಚಾರ್ಯರ ಮತ ಇನ್ನೊಬ್ಬ ಆಚಾರ್ಯರಿಂದ ಬೇರೆ.

ಆಗ ಯಾವದು ಪ್ರಮಾಣ. ನಮ್ಮ ಪ್ರಸಂಗಕ್ಕೆ ಪ್ರಮೇಯಕ್ಕೆ ಯಾವದು ಸಮಂಜಸ, ಸಮರ್ಪಕ ? ಇದನ್ನು ನಿದಾನಿಸಲಿಕ್ಕೆ ಕೊನೆಗೂ ಮೊದಲಿಗೂ ತರ್ಕವೇ ಬೇಕು. ತರ್ಕವೇ ಅಪ್ರತಿಷ್ಠವಾದ್ದರಿಂದ ಈ ಮತಮತಾಂತರಗಳ ಗೋಂದಲಪುರದ ಮಾಯಾಬಾಜಾರಿನಲ್ಲಿ ನಾವು ಕಂಗೆಡುತ್ತೇವೆ. ಶಬ್ದದಲ್ಲಿಯೂ ಪಾಠಭೇದ, ಮತಭೇದ, ಭಾಷ್ಯಭೇದ, ವೃತ್ತಿಭೇದ, ಅರ್ಥಭೇದ, ಆಪ್ತಭೇದಗಳನ್ನೆಲ್ಲ ನಿಷ್ಕರ್ಷೆಮಾಡಲಿಕ್ಕೆ ಅನುಮಾನವಿಲ್ಲದೆ ಬೇರೆ ಸಾಧನವಿಲ್ಲ. ಹೀಗೆ ಎಲ್ಲ ಪ್ರಮಾಣಗಳಿಗೂ ಆಧಾರವಾಗಿ, ಸತ್ಯ ಶೋಧಕನ ಅನುಗೋಲಾಗಿ ನಿಂತದ್ದು ನಡೆಯಿಸುವಂತಹದು ಅನುಮಾನವೇ. ಇದನ್ನೆ ತರ್ಕವೆಂದು ಕರೆಯುವದುಂಟು.

ಆದ್ದರಿಂದ ಸತ್ಯಕ್ಕೆ ಸಾಧನ ತರ್ಕ. ಬುದ್ಧಿಪ್ರಾಮಾಣ್ಯವೆಂದರೆ ತರ್ಕಸಂಗತ ವಿಚಾರಸರಣಿಗೆ ಪ್ರಾಧಾನ್ಯ. ತರ್ಕ ಶುದ್ಧ ವಿಚಾರಕ್ಕೇ ಯುಕ್ತಿಯೆನ್ನುತ್ತಾರೆ. ಉಪಯುಕ್ತಕ್ಕಿಂತ ಯುಕ್ತವನ್ನೆ ನಾವು ಆಶ್ರಯಿಸಿದರೆ ನಾವು ವಿಚಾರವಾದಿಗಳಾಗುತ್ತೇವೆ. ಹಾಗಿದ್ದರೆ ಇದೇನು ದೊಡ್ಡ ಮಾತು ? ತಿಳಿದೂ ತಿಳಿದೂ ತಿಳಿಗೇಡಿಯಂತೆ, ತಲೆತಿರುಕತನದ ತಿರುಗಣಿಯಲ್ಲಿ ಯಾರು ತೊಳಲಾಡುತ್ತಾರೆ ? ಬದುಕಿನಲ್ಲಿ ಏಳುವ ಪ್ರಶ್ನೆಗಳನ್ನೆಲ್ಲ ಸಾಕಷ್ಟು ವಿಚಾರ ಮಾಡಿಯೇ ನಾವು ತೀರ್ಮಾನಿಸುವದಿಲ್ಲವೇ ? — ಎಂದೆನ್ನಬಹುದು. ಆದರೆ ಇದು ಅಷ್ಟೊಂದು ನಿಜವಲ್ಲ, ಸರಿಯೂ

ಅಲ್ಲ. ಬದುಕಿನಲ್ಲಿ ನಾವು ಸಾಮಾನ್ಯವಾಗಿ ಬುದ್ಧಿಯನ್ನ
ಪ್ರಮಾಣವಾಗಿ ಇಟ್ಟುಕೊಂಡು ನಡೆಯುವದು ಕಡಮೆ.
ನಮ್ಮ ಬುದ್ಧಿ ಶುದ್ಧ ಅಪರಂಜಿಯಾಗಿ ದೊರೆಯುವದೇ
ಇಲ್ಲ. ಬಾಳಿನ ಕಣಿಯಲ್ಲಿ ಅನೇಕ ವಿಕಾರ-ವನ್ಯಪ್ರವೃತ್ತಿ
ಗಳ ಮಣ್ಣಿನ ಅದುರಿನಲ್ಲಿ ಬುದ್ಧಿಯ ಬಂಗಾರ ಕಣಕಣವಾಗಿ
ಮಿನುಗುತ್ತದೆ. ಕಾಮ, ಕ್ರೋಧ, ಲೋಭ, ಮೋಹ,
ಮದ, ಮತ್ಸರ ಈ ಮತ್ತು ಇವಕ್ಕೂ ಸೂಕ್ಷ್ಮವಾದ ವಿಕಾರ
ಗಳ ನೂರು ಗಾಳಿಗಳಿಗೆ ಒಡ್ಡಿದ ಸೊಡರು ನಮ್ಮ ವಿಚಾ
ರದ ನಂದಾದೀಪ! ಆ ಚಿಕ್ಕ ಜ್ಯೋತಿ ಅದೆಷ್ಟು ದೂರ
ಅದೆಷ್ಟು ತೀವ್ರ ತನ್ನ ಕಿರಣ ಬೀರಬಲ್ಲದು? ಆದರೂ
ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವನ್ನು ಹೇಗಾದರೂ ಕಾಪಾಡಿ
ಕೆಟ್ಟ ಕಣ್ಣುತಪ್ಪಿಸಿ ಒಯ್ಯುವಂತೆ, ನಾವು ಬುದ್ಧಿಯ ಈ
ಪುಟ್ಟ ಸೂಜಿಗಲ್ಲನ್ನು — ಹೋಕಾಯಂತ್ರವನ್ನು — ಭದ್ರ
ವಾಗಿ ಉತ್ತಮವಾಗಿ ಇಟ್ಟುಕೊಂಡು ಸಾಗಬೇಕಾಗಿದೆ.

ತಿಳಿಯಾದ ವಿಚಾರಕ್ಕೆ, ಶುದ್ಧವಾದ ತರ್ಕಕ್ಕೆ, ಉಚಿತ
ವಾದ ಅನುಮಾನಕ್ಕೆ ಬರುವ ಈ ವಿಘ್ನಗಳು ಎಂಥವು.
ಮೇಲೊಮ್ಮೆ ಕಾಮಕ್ರೋಧಾದಿ ನಮ್ಮ "ಹಳೆಯ ಹಗೆ"
ಗಳ ಹೆಸರು ಹೇಳಲಾಗಿದೆ. ಅವುಗಳಿಗೂ ಹೆಚ್ಚಿನ
ಬಲುಮೆಯ ಹಗೆಗಳೂ ಇವೆ. ಕಾಮ, ಕ್ರೋಧಗಳೇ
ಮೊದಲಾದವುಗಳು ನಮಗೆ ಒಳ್ಳೇ ಪರಿಚಿತ. ಅಂದರೆ
ನಮಗೆ ಗೊತ್ತಾಗುವಂತೆಯೇ ಅವು ಕಾಡುತ್ತವೆ. ಅವು
ಗಳನ್ನು ನಾವು ಕೆಲಮಟ್ಟಿಗಾದರೂ ಪ್ರತಿಭಟಿಸುತ್ತೇವೆ.

ಅವುಗಳದೇ ಮೇಲುಗೈ ಆದಾಗಲೂ, ನಾವು ನಮ್ಮ ಸೋಲಿಗೆ ಹೇಸಿಗೆಪಡದಿದ್ದರೂ ನಾಚಿಕೆಪಟ್ಟುಕೊಳ್ಳುತ್ತೇವೆ. ಆದರೆ ಇನ್ನೂ ಕೆಲವು ಮನೋವಿಕಾರಗಳ ಮಾತು ಹಾಗಿಲ್ಲ. ನಮಗೇ ಗೊತ್ತಾಗದಂತೆ ಅವು ಕೆಲಸಮಾಡುವವು. ( ಅಂದರೆ ನಮ್ಮ ವಿಚಾರದ ಕೆಲಸ ಕೆಡಿಸುವವು ! ) ಅದೂ ಅಲ್ಲ. ಅವುಗಳ ವರ್ಚಸ್ಸಿಗೆ ಒಳಪಟ್ಟು ವ್ಯವಹರಿಸುವ ಬುದ್ಧಿ ತಾನು ಸ್ವತಂತ್ರವೆಂದೇ ಸಾತ್ವಿಕವೆಂದೇ ತಿಳಿದುಕೊಂಡು ಸಂತೋಷ ಪಡುವದು. ಅಷ್ಟೇ ಅಲ್ಲ ಅಭಿಮಾನವನ್ನೂ ತಾಳುವದು ! ಅಷ್ಟು ಸೂಕ್ಷ್ಮವೂ ಮೋಸದ್ದೂ ಆಗಿದೆ ಈ ವಿಕಾರಗಳ ವಿಲಾಸ.

## ೧೯. ಶುದ್ಧ ಬುದ್ಧಿಗೆ ಸೂಕ್ಷ್ಮ ವಿಘ್ನಗಳು

### ೧ ಭಯ

ನಮ್ಮ ಬುದ್ಧಿಯ ಶುದ್ಧತೆಗೆ ಭಂಗತರುವಂಥ ವಿಕಾರಗಳಲ್ಲಿ **ಭಯುವು** ಮೊದಲನೆಯದು. ಭಯವೇ ಭಿಡೆಯಾಗಿ, ಸಂಕೋಚವಾಗಿ, ಸಂಶಯುವಾಗಿ, ವೈರಾಗ್ಯವಾಗಿ ಅನೇಕ ಅವತಾರಗಳನ್ನು ತಾಳುವದು. ಹೊಸ ವಿಚಾರಕ್ಕೆ, ಸ್ವತಂತ್ರ ವಿಚಾರಕ್ಕೆ, ತರ್ಕಶುದ್ಧ ವಿಚಾರಕ್ಕೆ ಮನಸ್ಸು ಅಳುಕುತ್ತದೆ. ಪ್ರವಾಹದ ಸೆಳವಿನ ಗುಂಟ ಈಜುವದಾಗಲಿ, ತೇಲುವದಾಗಲಿ ನಮಗೆ ಸುಲಭ, ಸುರಕ್ಷಿತ. ಅದೇ ಸೆಳವಿನ ವಿರುದ್ಧ ಸಾಗುವದು ತುಂಬ ಕಠಿಣ. ವಿಚಾರಧಾರೆಗೂ ಇದೇ ಮಾತು ಒಪ್ಪುತ್ತದೆ. ಮನುಷ್ಯ ಮೂಲತಃ

ಸಮಾಜ ಜೀವಿಯಾದ್ದರಿಂದ, ಮಂದಿಯ ಮಂದೆಯಿಂದ ಬೇರೆಯಾಗಿ ಆತ ಬಹುಕಾಲ ಒಂಟಿಯಾಗಿ ನಿಲ್ಲಲಾರ. ಇದೇ ಒಂಟಿತನದ ಭಯ. ಆತ ವಿಚಾರ ಪ್ರಪಂಚದಲ್ಲಿಯೇ ಕಾಣಿಸುತ್ತಾನೆ. ಸಾಮೂಹಿಕ ಮತದ ವಿರುದ್ಧ — ವಿರುದ್ಧವೇಕೆ ? ಅದರಿಂದ ತುಸು ವಿಂಗಡವಾಗಿಯೂ ಕೂಡ — ಆತ ಸ್ವತಂತ್ರವಾಗಿ ವಿಚಾರ ಮಾಡಲು ಇಷ್ಟ ಪಟ್ಟರೂ ಕಷ್ಟಪಡುವದಿಲ್ಲ — ಏಕೆಂದರೆ ಅಷ್ಟು ಧೈರ್ಯ ಸಾಲದು. ಹಾಗೆ ಒಂದು ವೇಳೆ ಆತ ಬುದ್ಧಿಯ ಕ್ಷೇತ್ರದಲ್ಲಿ ಒಂಟಿ ನೇಗಿಲು ಹೂಡಲು ಹೊರಟರೂ, ಸಾಮುದಾಯಿಕ ಮನಸ್ಸು — ಆತನ ಸಂಗಡ, ಜಾತಿ, ವರ್ಗ, ವ್ಯವಸಾಯ ಬಂಧುಗಳು, ಸಮಾಜ, ಸಂಘ, ಮಿತ್ರ ಮಂಡಲ, ಕುಟುಂಬ ಅಥವಾ ಪಕ್ಷ — ಆತನನ್ನು ಹಾಗೆ ಸಿಡಿದು ಹೋಗಲು ಬಿಡುವದಿಲ್ಲ. ಧರ್ಮ, ರೂಢಿ, ಸಂಪ್ರದಾಯ, ಶಿಷ್ಟಾಚಾರ, ಲೋಕಮತ ಇವೆಲ್ಲ ಆತನ ನೆತ್ತಿ ಕುಕ್ಕುವ ಅಂಕುಶದ ಮೊನೆಗಳಾಗಿ ಬರುತ್ತವೆ. ಗತಾನುಗತಿಕತೆಗೆ, ಮತಾನು ಯಾಯಿತನಕ್ಕೆ, ಸನಾತನ ಪರಂಪರೆಗೆ, ಪೂರ್ವಾಪರ ಪರಿ ಪಾಲನೆಗೆ ಮಹತ್ವವಿದ್ದ ಕಳೆದ ತಲೆಮಾರುಗಳಮಾತು ಏನೇ ಇರಲಿ. ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಈ ಸಾಮಾಜಿಕ ಮನಸ್ಸಿನ ವರ್ಚಸ್ಸು, ಸಾಮುದಾಯಿಕ ವಿಚಾರದ ಒತ್ತಾಯ, ಸಾರ್ವಜನಿಕ ಅಭಿಪ್ರಾಯದ ಪ್ರಭುತ್ವ ಎಂದಿಗಿಂತಲೂ ಹೆಚ್ಚಾಗಿದೆ, ಹಿರಿದಾಗಿದೆ. ಹೇಳಿ ಕೇಳಿ ಇದು ಪ್ರಜಾಪ್ರಭುತ್ವದ, ಬಹುಮತದ ಆಳಿಕೆಯ ಯುಗ. ಸರ್ವಾಧಿಕಾರಿಗಳಾದ ಹಿಟ್ಲರ ಮುಸಲೋನಿಯರ ಆಳಿ

ಕೆಯ ಕಾಲದಲ್ಲಿ ಇರಲಿ, ಸ್ಟಾಲಿನ್ ಕಮಾಲರ ಆಳಿಕೆಯ ಯುಗದಲ್ಲಿರಲಿ, ಕಮ್ಯುನಿಷ್ಟ ರಶಿಯದಲ್ಲಿರಲಿ, ಬಂಡವಾಳ ಸತ್ತೆಯ ಅಮೇರಿಕೆಯಲ್ಲಿರಲಿ, ಪರಂಪರಾಪ್ರಿಯ ಇಂಗ್ಲಂಡಿನಲ್ಲಿರಲಿ, ಸನಾತನ ಸಂಪ್ರದಾಯದ ಭಾರತ ದಲ್ಲಿರಲಿ — ಇಂದಿಗೆ ಎತ್ತನೋಡಿದರೂ ಒಂದಿಲ್ಲ ಒಂದು ವಿಧ " ಬಹುಮತದ ದಬ್ಬಾಳಿಕೆ " ಯೇ ಕಂಡು ಬರುತ್ತಿದೆ. ಇದರ ರಾಜಕೀಯ ಕಾರಣ - ನಿವಾರಣೆಗಳೇನೇ ಇದ್ದರೂ ನಮ್ಮ ಬುದ್ಧಿ ಸ್ವಾತಂತ್ರ್ಯದ ಪ್ರಸ್ತುತ ಪ್ರಶ್ನೆಯ ಮಟ್ಟಿಗೆ ಆಧುನಿಕ ಪ್ರಜಾಪ್ರಭುತ್ವದಲ್ಲಿಯೂ ಅನುಕೂಲ ಉತ್ತೇಜಕ ವಾತಾವರಣವಿಲ್ಲ. ಜನಾರ್ದನನ ಇಚ್ಛೆಗಿಂತಲೂ ಈ ಜನತಾಜನಾರ್ದನನ ಇಚ್ಛೆ ಹೆಚ್ಚು ಭಯಂಕರ ಮತ್ತು ಅಪಾಯಕರ. ಏಕೆಂದರೆ ಜನಾರ್ದನನ ಇಚ್ಛೆ ಅವ್ಯಕ್ತ. ನಾವು ಭಾವಿಸಿದಂತೆ ಅದರ ಫಲ. ಆದರೆ ಈ ಬಹುಮತದ ಆಗ್ರಹ ಬಹು ಜನರ ( ಮಹಾಜನರ ) ಇಚ್ಛೆ ನಮ್ಮ ಭಾವನೆಯನ್ನು ಅವಲಂಬಿಸಿಲ್ಲ. ಬಹುಜನರ ಬಿಡಿ ಬಿಡಿ ಯಾದ ಬುದ್ಧಿಯನ್ನೂ ಅವಲಂಬಿಸಿಲ್ಲ ! ಅದು ಒಂದು ರೀತಿ ದೈವೇಚ್ಛೆಯಂತೆ " ಅಪೌರುಷೇಯ " ವೇ ಸರಿ. ಆದರೂ ಅದರ ಫಲ ಮತ್ತು ಪ್ರತ್ಯಯ ಶೀಘ್ರ ಮತ್ತು ಉಗ್ರ. ವ್ಯಕ್ತಿಯ ಭಿನ್ನ ಮತವನ್ನು ಅದು ತನ್ನ ಬುದ್ಧಿಗೆ ಪ್ರತಿ ಷ್ಠೆಗೆ ಅಪಮಾನವೆಂದು ಭಾವಿಸುತ್ತದೆ. ಉಪಹಾಸದಿಂದ ಉಪದ್ರವದವರೆಗೂ ಅದು ಪ್ರಕಟವಾಗಿ ಪೀಡಿಸುವ ಬಗೆ ಬಗೆಬಗೆಯಾಗಿದೆ. ಇದರ ಮೂಲಕ್ಕೆ ನಾವು ಇಲ್ಲಿ ಇಳಿಯ ಬೇಕಾಗಿಲ್ಲ. ಒಟ್ಟಾರೆ, ಸ್ವತಂತ್ರ ವಿಚಾರಕ್ಕೆ ಹಿಂದಿನ

ದಿರಲಿ, ಇಂದಿನದಿರಲಿ ಯಾವದೇ ಸಮಾಜ ಹೆಚ್ಚು ಪ್ರೋತ್ಸಾಹ ಕೊಡುವದಿಲ್ಲವೆಂಬುವದೇ ಇಲ್ಲಿ ಗಮನಿಸ ಬೇಕಾದದ್ದು. ಆದ್ದರಿಂದ ತಾನು ಏಕಾಕಿ ಅಲ್ಪ ಮತದವ ನಾಗಬಹುದೆಂಬ ಭಯದಿಂದ ಇಂದಿನ ನಾಗರಿಕ ಸ್ವತಂತ್ರ ವಾಗಿ ವಿಚಾರಮಾಡುವ ಗೊಡವೆಗೇ ಹೋಗುವದಿಲ್ಲ.

ಮೂಢಭಾವನೆಯೇ ಆಳುವ ಜನರ ನಡುವೆ ವಿಚಾರ ವಾದಿಯು ಲೋಕಕಂಟಕನೆನಿಸಬಹುದು. ಇಲ್ಲವಾದರೆ ಸಾಕ್ರೆಟೀಸನು ವಿಷ ಕುಡಿಯುವದೇಕೆ ? ಯೇಸುವು ಸಿಲುಬೆಗೇರುವದೇಕೆ ? ಗಾಂಧೀಜೀ ಗುಂಡಿಗಾಹುತಿ ಯಾಗುವದೇಕೆ ? ಮಾರಿಬೇನೆ ಬಂದ ಒಂದು ಹಿಂದುಳಿದ ವರ್ಗದವರ ವಸತಿಯಲ್ಲಿ ಮಾಂತ್ರಿಕನಿಗೆ ಇದ್ದ ಮನ್ನಣೆ ಮತ್ತು ಬೇಡಿಕೆ ಮದ್ದು ಚುಚ್ಚುವ ವೈದ್ಯನಿಗೆ ಇಲ್ಲ.

ಮೂಢಭಾವನೆ ಸಾಂಪ್ರದಾಯಕತೆ ಅಥವಾ ಒಂದು ದೇಶ ಕಾಲ – ಕುಲಾಚಾರಗಳ ವಿಶಿಷ್ಟ ಒತ್ತಾಯ ಇಂಥ ಸಾರ್ವತ್ರಿಕ ಭಯ ಮೂಲಗಳನ್ನು ಬಿಟ್ಟರೂ, ನಮ ನಿಮಗೆ ಕಾಡುವ ಕಾಲ್ತೊಡಕಾಗುವ ಭಯ ಇನ್ನೂ ಬೇರೆ ಬೇರೆ ಬಗೆಯಾಗಿದೆ. ನಮ್ಮ ವರಿಷ್ಠರ ಭಯ, ಆಳುವ ರಾಜಕೀಯ ವರ್ಗದ ಭಯ, ಸಮಾಜದ ಶ್ರೇಷ್ಠಿಗಳ ಭಯ ಆರ್ಥಿಕಮುಗ್ಗಟ್ಟು ಉಂಟುಮಾಡಬಲ್ಲ ಶಕ್ತಿಗಳ ( ಅಂದರೆ ದುಷ್ಟ ವ್ಯಕ್ತಿಗಳ ) ಮೂರ್ಖಹಟದ ಭಯ, ಕೊನೆಗೆ ಏನಿಲ್ಲದಿದ್ದರೂ ತಾನೇ ಮೆಚ್ಚಿದ ತನ್ನ ಮಟ್ಟದ ಮಿತ್ರ

ಮಂಡಳಿಯ ಇಲ್ಲವೆ ಪ್ರತಿಷ್ಠಿತ ಸಮಾಜದ ಮೂದಲಿ
ಕೆಯ ಭಯ — ಹೀಗೆ ಒಂದಲ್ಲ ಒಂದು ಒಂದಕ್ಕಿಂತ
ಒಂದು ಬಲವಾಗಿ ನಮ್ಮನ್ನು ಅಳುಕಿಸುತ್ತದೆ. ಈ ವಿಚಿತ್ರ
ನೋಡಿ! ತಾನು ತನ್ನವರಲ್ಲಿ ಬುದ್ಧಿವಂತನೆನಿಸಿಕೊಳ್ಳ
ಬೇಕೆಂದೇ ಅನೇಕರು ಅನೇಕ ಸಲ ಏನೆಲ್ಲ ಮೂರ್ಖತನ
ವನ್ನು ಒಪ್ಪುವದುಂಟು — ಒಪ್ಪಿ ನಡೆಯುವದುಂಟು!
ಸುಪ್ರಸಿದ್ಧ ಕತೆಗಾರ ಹ್ಯಾನ್ಸ ಎಂಡರಸನ್ ಬರೆದ "ಚೀನೀ
ದೊರೆಯ ಬಟ್ಟೆಯ ಹುಚ್ಚು"ನ ಕತೆ ನಮ್ಮ ನಿಮ್ಮ ಬಾಳಿ
ಗಂಟಿಕೊಂಡ ಈ ಲೋಕಾಪವಾದ ಭಯದ ಹುಚ್ಚಿಗೆ
ಕೂತಗನ್ನಡಿ ಹಿಡಿಯುವಂತಿದೆ! "ದೊರೆಯು ಬತ್ತಲೆ"
ಎನ್ನುವ ಧೈರ್ಯ ಆ ಮೆರವಣಿಗೆಯಲ್ಲಿ ಯಾರಿಗೂ ಇದ್ದಿಲ್ಲ.
ಏಕೆ? ಹಾಗೆ ತಾನೊಬ್ಬನೆ ಅಂದರೆ ತಾನೇ ಮೂರ್ಖನೆಂದಾಗಿ
ಬಿಟ್ಟರೆ! "ನಗ್ನ ಸತ್ಯ" ವೆಂಬ ಮಾತು ಯಾರು ಮೊದಲು
ನುಡಿದರೋ! ನಗ್ನತೆಯಷ್ಟೇ ಸತ್ಯವೂ ಜನಸಾಮಾನ್ಯ
ರಿಗೆ ಅಸಹ್ಯವೆನಿಸುತ್ತದೆ — ದಿಗಿಲುಗೊಳಿಸುತ್ತದೆ, ಕಂಗೆಡಿ
ಸುತ್ತದೆ! ಅಂದರೂ ಈ ಮೆರವಣಿಗೆ ತಡೆಯು
ವಂತಿಲ್ಲ; ನಿಷ್ಠೆ ಸತ್ತಮೇಲೂ ಪ್ರತಿಷ್ಠೆಗಾಗಿ ಮೆರವಣಿಗೆ
ಮುಂದೆ ನಡೆಯಲೇಬೇಕು, ಇರಲಿ.

## ೨ ಪೂರ್ವಗ್ರಹಿಕೆ

ಭಯದ ನಂತರ — ಅಂದರೆ ಇದೊಂದು ಅನುಕ್ರಮ
ವೆಂದಲ್ಲ — ನಮ್ಮ ವಿಚಾರವನ್ನು ಮಲಿನಗೊಳಿಸುವ

ಬಣ್ಣಗೆಡಿಸುವ ಎರಡನೆಯ ವಿಕಾರ **ಪೂರ್ವಗ್ರಹಿಕೆ**
ನವಗ್ರಹಗಳಿಗಿಂತಲೂ ಈ "ಪೂರ್ವಗ್ರಹ" ನವ
ಮುಕ್ಕಾಲು ಪಾಲು ಬಾಳನ್ನು ಬಾಧಿಸುವ ದಶಮ ಗ್ರಹ
ಎಂಥ ವಿದ್ವತ್ತೆಯೂ ಪೂರ್ವಗ್ರಹಿಕೆಗಳ ಹುಲ್ಲುಕರಿ
ಯನ್ನು ಬೇರುಗೂಡಿ ಕಿತ್ತೊಗೆಯಲಾರದು. ಪೂರ್ವ
ಗ್ರಹಿಕೆ ಒಂದು ವಿಪರೀತ ಸಂಸ್ಕಾರ. ನಮಗೆ ಕೆಲವೊಂದ
ವ್ಯಕ್ತಿಗಳ ಕುರಿತು, ಸಂಸ್ಥೆಗಳ ಕುರಿತು, ಪದ್ಧತಿಗ
ಕುರಿತು, ವ್ಯವಹಾರಗಳ ಕುರಿತು ವಿನಾಕಾರಣವಾದ ಒಂದ
ತಿರಸ್ಕಾರವೋ, ತಾತ್ಸಾರವೋ, ಅಸಹನೆಯೋ ಇರುವ
ದುಂಟು. ಎಷ್ಟೋಸಲ ಇದಕ್ಕೆ ವಿಪರೀತವಾಗಿ ಏನಿಲ್ಲದ
ಆದರ — ಪ್ರಶಂಸೆಗಳೂ ಅನಿಸುವದುಂಟು. ಆದರ
ಒಟ್ಟಾರೆ "ಪೂರ್ವಗ್ರಹಿಕೆ" ಗಳೆನ್ನುವಾಗ ಇಂಥ ಪ್ರಶಂಸ
ಪ್ರವೃತ್ತಿಗಿಂತ ತಿರಸ್ಕಾರ ಪ್ರವೃತ್ತಿಯ ಉದಾಹರಣೆಗಳ
ಹೆಚ್ಚು ನೆನಪಾಗುತ್ತವೆ. ಚಿಕ್ಕಂದಿನಲ್ಲಿಯೇ, ನಮ್ಮ
ಬುದ್ಧಿ ಪರಿಪಕ್ವವಾಗುವ ಮೊದಲೆ ಇಂಥ ಗ್ರಹಿಕೆಗಳನ್ನು
ನಾವು ಯಾವ ಅನುಮಾನವೂ ಇಲ್ಲದೆ ನಮಗೆ ತಿಳಿಯದಂ
ಎಂದೋ ಹೇಗೋ ಹಿರಿಯರಿಂದ, ನೆರೆಕರೆಯವರಿಂ
ನಮ್ಮ ಮನಸ್ಸಿನ ಆಳದಲ್ಲಿಯೇ ಅರಗಿಸಿಕೊಂಡಿರ
ತ್ತೇವೆ. ಯಾವಾಗಲೋ ಒಂದು ಪ್ರತಿಕೂಲ ಪ್ರಸಂಗ
ದಲ್ಲಿ ಒಬ್ಬ ವ್ಯಕ್ತಿ, ಒಂದು ವಸ್ತು ನಮ್ಮ ಮನಸ್ಸಿನಲ್ಲಿ ಕೆಟ್ಟ
ದೊಂದು ಆಘಾತ ಮಾಡಿದ್ದಿರುತ್ತದೆ. ಹಲವು ಸಲ ಹಾಗ
ಮಾಡಿರಬಹುದೆಂದು ನಾವು ಭಾವಿಸಿದ್ದೂ ಇರಬಹುದು
ಅಂದಿನಿಂದ ಆ ವ್ಯಕ್ತಿ ಆ ವಸ್ತುಗಳ ಕುರಿತು ನಮ್ಮ ಬುದ್ಧಿ

ಯೋಗ್ಯ ತೀರ್ಮಾನಕ್ಕೆ ಬಾರದೇ ಹೋಗುತ್ತದೆ. ಇದು ಮ್ಮ ಪೂರ್ವಗ್ರಹಿಕೆಗಳ ಪರಿಪಾಕ.

14839

ಹೀಗೆ ಪೂರ್ವಗ್ರಹಿಕೆಗಳ ಭೂತ ಯಾವ ಅಭಿಪ್ರಾಯಕ್ಕೆ ಡಿದಿದೆಯೆಂಬುದನ್ನು ನಾವು ಸುಲಭವಾಗಿ ತಿಳಿಯ ಹುದು. ಅಂಥ ಅಭಿಪ್ರಾಯ ಎಂದೂ ಸಮಂಜಸ ಲ್ಲವೆ ಸರಿತೂಕದ್ದು ಇರುವದಿಲ್ಲ. ಅದರ ಅವಿವೇಕ ದರ ಅತಿರೇಕದಲ್ಲಿ ಕಾಣುತ್ತದೆ. ಸಬಲ ಕಾರಣ ಕಷ್ಟು ಪ್ರಮಾಣವಿಲ್ಲದ ವಿಧಾನಗಳಲ್ಲಿಯೂ ವಿಪರೀತ ಗ್ರಹ, ಉಗ್ರತೆಗಳು ಪ್ರಕಟವಾದಲ್ಲೆಲ್ಲ ಅದು ಪೂರ್ವ ್ರಹದ "ದಶಾಭುಕ್ತಿ" ಯೆಂದು ತಪ್ಪದೆ ಊಹಿಸಬಹುದು. ದು ನಮ್ಮ ನಿಮ್ಮ ಸಾಮಾನ್ಯ ತಿಳುವಳಿಕೆಯ ವ್ಯವಹಾರ ಲ್ಲಿ ಆಗಾಗ್ಗೆ ವ್ಯಕ್ತವಾಗುತ್ತದೆ. ಆದರೆ ನಮ್ಮ ದುರ್ದೈವ ಂದರೆ, ನಮ್ಮ ಜನತೆಯ ಕಲ್ಯಾಣವನ್ನು ಕಟ್ಟಲು ೂರಟ ಭವಿಷ್ಯದ ಭಾಗ್ಯವಿಧಾತರೆನಿಸಿಕೊಳ್ಳುವ ನಾಯಕ ಗೂ ಈ ಪೂರ್ವಗ್ರಹದ ಅದೃಷ್ಟಯೋಗ ಪ್ರಬಲವಾಗಿ ಾಡಿದ್ದು ಕಂಡು ಬರುತ್ತದೆ. ಅಂಥಲ್ಲಿ ಮಿಕ್ಕವರ ಾತೇನು ? ಸಾಮಾನ್ಯವಾಗಿ, ಸಂತತಿ ನಿಯಮನ, ಗೋತ್ರ ವಿವಾಹ, ಜಾತೀಯತೆ, ಪಾನಪ್ರತಿಬಂಧ, ಂಗ್ಲಿಷ್ ಶಿಕ್ಷಣ ಮುಂತಾದ ಹಲವಾರು ಪ್ರಶ್ನೆಗಳ ಬಗೆಗೆ ಾವು ತಾಳ್ಮೆಯಿಂದ ತಿಳುವಳಿಕೆಯಿಂದ ವಿಚಾರ ಮಾಡಲು ಷ್ಟೋಸಲ ಅಸಮರ್ಥರೆನಿಸಿಕೊಳ್ಳುತ್ತೇವೆ. ನಮಗೆ ಳ್ಳನ ಕುರಿತು ತಿರಸ್ಕಾರ, ಕೊಲೆಗಡಕನ ಕುರಿತು ಜುಗುಪ್ಸೆ

ಅನಿಸುತ್ತದೆ. ಆದರೆ ಫೋರ್ಜರಿ ಮಾಡಿ ಹೆರವರ ಸೊತ್ತ
ಎತ್ತಿ ಹಾಕಿದವನ ಅಥವಾ ಕಳ್ಳಪೇಟೆಮಾಡಿ ಮಂದಿಯ
ಮನೆಹಾಳು ಮಾಡಿದ ಧೂರ್ತನೊಂದಿಗೆ ಕೈ ಕುಲುಕಲ
ನಾವು ಹೇಸುವದಿಲ್ಲ! ಇವೆಲ್ಲ ಪೂರ್ವ ಗ್ರಹಿಕೆಗಳದ
ಆಟ! ಇದನ್ನೆ ಸಾವಿರಾರು ವರ್ಷಗಳ ಆಚೆ ಇಸೋಪನ
ಬಾಲಕೊಯ್ದುಕೊಂಡ ನರಿಯ ಕತೆಯಿಂದ ಅಜರಾಮ
ವಾಗಿ ನಿರೂಪಿಸಿದ್ದಾನೆ. ಹೀಗೆ ಪೂರ್ವಗ್ರಹಗಳು ನಮಗ
ಗೊತ್ತಾಗದಂತೆ ನಮ್ಮ ವಿಚಾರ ಸರಣಿಯನ್ನು ದೂಷಿ
ಗೊಳಿಸುತ್ತವೆ.

## ೩ ಅಜ್ಞಾನ — ಅರೆಬರೆಜ್ಞಾನ

ಇದೇರೀತಿ ನಮ್ಮ ಬುದ್ಧಿಯನ್ನು ಕುಂಠಿತ ಮಾಡು
ಇನ್ನೊಂದು ಪ್ರಬಲವಾದ ಸಂಗತಿ ನಮ್ಮ **ಅಜ್ಞಾನ**
ಅಥವಾ **ಅರೆಬರೆಜ್ಞಾನ.** ಹಾಗೆ ನೋಡಿದರೆ, ಯಥಾರ್ಥ
ಜ್ಞಾನವಿಲ್ಲದಿರುವದೇ ಎಲ್ಲ ತರ್ಕ ದೋಷಗಳಿಗೆ ಉಗವ
ವೆನ್ನಬಹುದು. ಅದೇರೀತಿ, ಸರಿಯಾಗಿ ನಿರ್ದೋಷವಾ
ತರ್ಕಮಾಡುವದರಿಂದಲೇ ಯಥಾರ್ಥ ಜ್ಞಾನದ ಉಗವ
ವೆಂದೂ ಹೇಳಬಹುದು! ಆದರೆ ಈ ತಾತ್ವಿಕ ಭೂಮಿಕ
ಯನ್ನು ಬಿಟ್ಟರೂ ವ್ಯವಹಾರದಲ್ಲಿ ನಮಗೆ ಕಂಡುಬರು
ದೇನೆಂದರೆ ಅಜ್ಞಾನ ಅಥವಾ ಅಪೂರ್ಣಜ್ಞಾನ ನಮ
ಅನೇಕ ಮಿಥ್ಯಾನುಮಾನಗಳಿಗೆ ಕಾರಣವಾಗಿರುತ್ತದ
ಎಷ್ಟೋಸಲ ಸಾಕಷ್ಟು ಆಧಾರ - ಪ್ರಮಾಣಗಳಿಲ್ಲ

ಾವು ಅನುಮಾನಕಟ್ಟುತ್ತೇವೆ. ಸಂದಿಗ್ಧವಿದ್ದುದನ್ನೆ ಸ್ವತಃ ದ್ಧವೆಂದಿಟ್ಟುಕೊಂಡು ನಾವು ತರ್ಕಕ್ಕೆ ಹೊರಡುತ್ತೇವೆ! ಂದೆರಡು ಉದಾಹರಣೆಗಳಿಂದಲೇ ನಾವು ಒಂದು ನಿಯಮ ನ್ನು ಹೆಣೆಯುತ್ತೇವೆ! ಆಕರ್ಷಕ ಉಪಮೆಯನ್ನೆ ಮರ್ಪಕ ಯುಕ್ತಿವಾದವೆಂದು ಮುಗ್ಧರಾಗುತ್ತೇವೆ. ದೂ ಅಲ್ಲದೆ ಒಂದು ಕ್ಷೇತ್ರದಲ್ಲಿಯ ಉಪಮೆ ಇನ್ನೊಂದು ೇತ್ರದಲ್ಲಿ ಹೇಗೋ ಅನ್ವಯಿಸಿ ಅದೇ ಸರಿಯಾದ ್ರಮಾಣ್ಯವೆಂದು ಮೋಸ ಹೋಗುತ್ತೇವೆ.

ಇದಕ್ಕೂ ಹೆಚ್ಚಿನ ಘಾತಮಾಡುವ ನಮ್ಮ ಅಜ್ಞಾನ ಂದರೆ ಯಾರು ಯಾವ ಕ್ಷೇತ್ರದಲ್ಲಿ ಯಾವ ಜ್ಞಾನದ ಟ್ಟಿಗೆ ಅಧಿಕಾರ ವಾಣಿಯಿಂದ ಆಡಬಲ್ಲನೆಂಬುದೇ ಮಗೆ ಗೊತ್ತಿರುವದಿಲ್ಲ. ಒಂದು ಕ್ಷೇತ್ರದಲ್ಲಿ ಮನ್ನಣೆ ಡೆದ ವ್ಯಕ್ತಿಯ ಎಲ್ಲ ಬಗೆಯ ಅಭಿಪ್ರಾಯಗಳನ್ನು ನಾವು ್ಯಕ್ತಿಗೌರವದಿಂದ ಪ್ರಮಾಣವೆಂದು ನಂಬುತ್ತೇವೆ. ್ಯಾಯಾಧೀಶರು ಸಂಗೀತದಮೇಲೆ, ಪ್ರಧಾನಮಂತ್ರಿ ತ್ರಿಕಾಕರ್ತರಮೇಲೆ, ಮಹಾತ್ಮಾಜಿ ಆರೋಗ್ಯ ಚಿಕಿತ್ಸೆ ಯಿಂದ ಸಂತತಿನಿಯಮನದವರೆಗಿನ ಎಲ್ಲ ವಿಷಯಗಳ ೕಲೆ, ರಾಜಕೀಯ ಪುಢಾರಿಯು ಕಲೆಯಮೇಲೆ, ನೇಮಾತಾರೆಯು ದಾಂಪತ್ಯ ಜೀವನದಮೇಲೆ — ಹೀಗೆ ಂದು ಕ್ಷೇತ್ರದಲ್ಲಿಯ ಅನುಭವ ಇನ್ನೊಂದು ಕ್ಷೇತ್ರದಲ್ಲಿ ಧಿಕಾರ ಕೊಡುವಂತಾಗಿ ದೊಡ್ಡವರು ಹೇಳುವದೆಲ್ಲ,

ತಿಳಿದದ್ದೆಲ್ಲ ದೊಡ್ಡದು — ಎಂಬ ಹುಚ್ಚು ಹುಚ್ಚಾ
ಭಾವನೆ ಪ್ರಭಾವ ಪೂಜಕರಾದ ನಮಗೆ ವಜ್ರಲೇಪವಾ
ಬಿಟ್ಟಂತಿದೆ. "ಹಾರುವನಿಗೆ ಡೋಣಿಯಾಕೆ? ಅಂಬಿ
ನಿಗೆ ಆಕಳೇಕೆ?" — ಎಂದು ಕೊಂಕಣಿಯಲ್ಲಿ ಒಂದ
ಗಾದೆ ಪ್ರಸಿದ್ಧವಿದೆ. ಆದರೆ ಇಂದಿಗೆ ಸಾರ್ವಜನಿ
ಪ್ರಪಂಚದಲ್ಲಿ ಇದೇ ಮಾದರಿಯ ಮತಸಂಕರ ಕಂಡ
ಬರುತ್ತದೆ. ರಾಜ್ಯದ ಮಂತ್ರಿ, ರಾಜಕೀಯ ಮುಂದಾಳ
ಸಾರ್ವಜನಿಕ ವ್ಯಕ್ತಿ ಎಂಥ ವಿಷಯದ ಮೇಲೇ ಆಗ
ಒಂದು ಭಾಷಣ ಬಿಗಿಯಲೇಬೇಕು -- ಮತ್ತು ಆ ಭಾಷ
ದಲ್ಲಿಯ ಅವನ ಅಂಬೋಣ ಜಾತ್ರೆಮರುಳು ಜನ ಒ
ತಲೆದೂಗಲೇಬೇಕು !

ಇದಕ್ಕೆಲ್ಲ ಕಾರಣ ನಮ್ಮ ನಿಮ್ಮ ಅಪೂರ್ಣಜ್ಞಾನ
ಅಥವಾ ಅಜ್ಞಾನ. ಒಂದು ವಿಷಯದ ವ್ಯಾಖ್ಯೆಯೇನ
ವ್ಯಾಪ್ತಿ ಎಷ್ಟು, ಅದರ ನಿಜವಾದ ವ್ಯಾಸಂಗ ಯಾರದು –
ಈ ಕುರಿತು ನಾವು ತಕ್ಕಷ್ಟು ತಿಳಿದಿರುವದಿಲ್ಲ, ತಿಳಿದ
ಕೊಳ್ಳಬೇಕೆಂಬ ತವಕವೂ ನಮಗೆ ಇದ್ದಂತೆ ತೋರುವದಿಲ್ಲ
ರೋಗ ರುಜೆಗಳು ಬಂದಾಗ ಮದ್ದುಗಾರನಿಗಿಂತ ಮಾಂತ್ರಿ
ನನ್ನೇ ಮೊರೆಹೋಗುವ ಮಂಕು ಜನ ನಮ್ಮಲ್ಲಿ ಎಷ್ಟಿಲ್ಲ
ಯಾವ ಕ್ಷೇತ್ರದಲ್ಲಿ ಯಾರು ತಜ್ಞರೆಂದು ತೀರ್ಮಾನಿಸಲ
ಕೂಡ ನಮ್ಮಲ್ಲಿ ಅನೇಕರು ಅನರ್ಹರಿರುತ್ತಾರೆ! ಎಷ್ಟೊ
ಸಲ ನಾವು ಊರೊಳಗಿನ ದಯಾಳುವಾದ ಡಾಕ್ಟರನನ್ನ

ಕ್ಷನೂ, ತಜ್ಞನೂ ಆದ ಚಿಕಿತ್ಸಕನೆಂದು ನಂಬುತ್ತೇವೆ. ದರೆ ನಮ್ಮ ಈ ಪ್ರವೃತ್ತಿ – ಅಧಿಕಾರ – ತಜ್ಞತೆಗಳ ುರಿತು ತೀರ ಅವ್ಯವಸ್ಥಿತವಾದ ನಮ್ಮ ಕಲ್ಪನೆ – ಶುದ್ಧವಾದ ಚಾರಸರಣಿಗೆ ಎಷ್ಟು ವಿಸಂಗತವೋ ಅಷ್ಟೇ ವಿಘಾತಕ ಂಬುದೇ ಇಲ್ಲಿಯ ಮಾತಿನ ಮುಖ್ಯ ಅಂಶ.

•

ನಮ್ಮ ಈ ಅಪೂರ್ಣಜ್ಞಾನದ ಮಾಯಾವಿಲಾಸ ೕನೆಂದರೆ ನಾವು ಅನೇಕಸಲ ಕಾರ್ಯವನ್ನೆ ಕಾರಣವೆಂದು, ನುಕ್ರಮವನ್ನೆ ಪರಿಣಾಮಕ್ರಮವೆಂದು, ಲಕ್ಷಣವನ್ನೆ ಣವೆಂದು, ಅಂಶವನ್ನೆ ಪೂರ್ಣವೆಂದು, ಕಂಡದ್ದೇ ಂಡಷ್ಟೇ ಸತ್ಯವೆಂದು ಮೋಹಕ್ಕೆ ಒಳಗಾಗುತ್ತೇವೆ. ೋರಿಕೆಯ ಹೋಲಿಕೆಯೇ ನಿಜವಾದ ಸಾಧರ್ಮ್ಯವೆಂದು ೊಳ್ಳುತ್ತೇವೆ. ಕವಿ ಸಮಯಗಳನ್ನೂ, ಸುಭಾಷಿತ ಳನ್ನೂ, ತ್ರಿಕಾಲಾಬಾಧಿತ ಸತ್ಯಗಳೆಂದು ಭಾವಿಸುತ್ತೇವೆ. ಮ್ಮ ಮಾನುಷ ವ್ಯಾಪಾರಗಳ ಹಾಗೂ ವೈಶಿಷ್ಟ್ಯಗಳ ೀತಿ ಲಕ್ಷಣಗಳನ್ನು ಎಲ್ಲೆಡೆಗೂ ಆರೋಪಿಸುತ್ತೇವೆ. ರಿಯಾದ ವಿಚಾರಸರಣಿಗೆ ಇವು ಆತಂಕ ಒಡ್ಡುತ್ತವೆ. ೂರದರ್ಶಕಯಂತ್ರದ ನಳಿಕೆಯೊಳಗೆ ಜೇಡವೊಂದು ಜಾಳಿಗೆ ಟ್ಟಿದರೆ ಆ ನಳಿಕೆಯೊಳಗಿಂದ ನೋಡುವ ಸರಳ ಮನ ್ನ ವಿಜ್ಞಾನಿಯೊಬ್ಬ ತಾನು ಕಂಡ ಗ್ರಹಗೋಲದಲ್ಲಿಯೇ ನೋ ಪ್ರಚಂಡ ಜಾಳಿಗೆಯಂತಹ ಕಲೆ ಇದೆಯೆಂದು ರ್ಕಿಸಿ ಆ ಕುರಿತು ಭಾರವಾದ ಒಂದು ಪ್ರಬಂಧ ಬರೆದರೆ

ಹೇಗೆ ? ಹಾಸ್ಯಾಸ್ಪದವಲ್ಲವೇ ? ಆದರೆ ನಾವೆಲ್ಲ ಹೆಚ್
ಕಡಮೆ ಹೀಗೆಯೇ ವರ್ತಿಸುತ್ತೇವೆ. ನಮ್ಮ ದೃಷ್ಟಿಯ
ದೋಷ, ಜ್ಞಾನದ ದೋಷ ನಮ್ಮ ತರ್ಕದ ವಿಶಿಷ್ಟ ಗು
ವೆಂದೇ ಭಾವಿಸಿ ಸತ್ಯಶೋಧನೆಗೆ ಹೊರಡುತ್ತೇವೆ.

ಅರ್ಧ ಅಪೂರ್ಣ ಜ್ಞಾನದ ಒಂದು ಲಕ್ಷಣವೆಂದ
ತಾರತಮ್ಯವಿಲ್ಲದಿರುವದು. ಒಂದು ವಿಷಯದ ಅಳ
ಗೋಲನ್ನು, ಒಂದು ಕ್ಷೇತ್ರದ ಬೆಲೆಯ ತೂಕದ ಪರಿಮಾ
ಗಳನ್ನು ಬೇರೊಂದು ವಿಷಯಕ್ಕೂ ಕ್ಷೇತ್ರಕ್ಕೂ ಹಚ್ಚು
ಹವ್ಯಾಸ ನಮಗೆ ಬಹಳ. ಕಲಾಕ್ಷೇತ್ರದಲ್ಲಿ ಪ್ರಜಾಪ್ರಭ
ತ್ವದ ಮೂಲ್ಯಗಳನ್ನೂ, ಸಾಹಿತ್ಯಕ್ಷೇತ್ರದಲ್ಲಿ ಜಾತೀಯ
ಪ್ರಾತಿನಿಧ್ಯದ ತತ್ತ್ವವನ್ನೂ, ವೇದಾಂತದಲ್ಲಿ ರಾಜಕೀಯ
ಬಣ್ಣವನ್ನೂ, ರಾಜಕಾರಣದಲ್ಲಿ ವಿಭೂತಿ ಪೂಜೆಯನ್ನೂ
ತಂದೊಡ್ಡಿ ನಾವು ಹಲವು ಸಲ ಯೋಗ್ಯ ನಿರ್ಣಯಗಳಿಗೂ
ಅಯೋಗ್ಯ ಕಾರಣಗಳನ್ನು ಕೊಡುವದುಂಟು. ಇನ್ನೂ
ಕೆಲವು ಸಲ ಯೋಗ್ಯ ವಿಚಾರಸರಣಿಯನ್ನು ಅನುಸರಿಸಿಯೂ
ತಪ್ಪಿದ ತೀರ್ಮಾನಗಳಿಗೆ ತಲುಪುವದೂ ಉಂಟು ! ಇ
ರಿಂದ ಅಲ್ಲದ ಅವಿವೇಕಕ್ಕೆ ಸಲ್ಲದ ಅತಿರೇಕ ಕೂಡಿ ಅನೇ
ಮುಖವಾದ ಅನರ್ಥವನ್ನು ಎದುರಿಸಬೇಕಾಗಿ ಬರ
ತ್ತದೆ. ! ಇದರ ನೂರಾರು ಉದಾಹರಣೆಗಳನ್ನು ವಿಸ್ತಾರ
ಭಯದಿಂದ ಹತ್ತಿಕ್ಕಬೇಕಾಗಿದೆ.

## ೪ ಸ್ವಾರ್ಥ

ಇನ್ನು ಶುದ್ಧ ತರ್ಕವಿಧಾನಕ್ಕೆ ಅಡ್ಡಿಯೊಡ್ಡುವ ಂಗತಿ ಸ್ವಾರ್ಥ. “ ಅರ್ಥಸ್ಯ ಪುರುಷೋ ದಾಸಃ ” — ಂದು ಸಭಾಪರ್ವದಲ್ಲಿ ದ್ರೌಪದಿಯ ಪ್ರಶ್ನೆಗಳನ್ನು ಉತ್ತರಿಸ ಾರದೆ ಭೀಷ್ಮಾಚಾರ್ಯರು ಅಂದದ್ದು ಕೇವಲ ಹಂಗಿನ ೂಳಿಗದ ಅಥವಾ ಕೌರವನ ಅನ್ನವುಂಡದ್ದರ ಕುರಿತೇ ನ್ವಯಿಸುವ ಮಾತಲ್ಲ. ಹಾಗೆ ನೋಡಿದರೆ ಕೃಪ, ್ರೋಣ, ಕರ್ಣಾದಿಗಳ ಮಾತು ಏನೇ ಇರಲಿ, ೀಷ್ಮಾಚಾರ್ಯರೇನು ಹಂಗಿನ ಅರಮನೆಯ ಅನ್ನಕ್ಕೆ ಾರಿಹೋದವರಿದ್ದಿಲ್ಲ. ಅರಸೊತ್ತಿಗೆಯೋ ಅವರದಿತ್ತು. ದನ್ನು ಅಲ್ಲಗಳೆದರೂ, ಅರಸೊತ್ತಿಗೆಯಲ್ಲಿ ಅವರ ದಾಯ ಾಗವಂತೂ ಇದ್ದೇ ಇತ್ತು. ಆದ್ದರಿಂದ ಅವರೇನು ಯಾರ ರ್ಥಕ್ಕೂ ದಾಸರಿದ್ದಿಲ್ಲ. ಆದರೆ ಆ ಮಾತು ಹೇಗೇ ರಲಿ, ಭೀಷ್ಮಾಚಾರ್ಯರು ಉದಾಹರಿಸಿದ ಸಂದರ್ಭವನ್ನೂ ೀರಿದ ಸತ್ಯ ಅವರ ಆ ಉದ್ಗಾರದಲ್ಲಿ ಹುದುಗಿದೆ. ್ರತಿಯೊಬ್ಬನೂ ಒಂದಲ್ಲ ಒಂದು ಅರ್ಥಕ್ಕೆ ಕಟ್ಟುಬಿದ್ದಿರು ್ತಾನೆ. ಅದು ಆತನ ಕೇವಲ ಸಂಕುಚಿತ ಸ್ವಾರ್ಥವೇ ರಬೇಕಾಗಿಲ್ಲ. ಪ್ರತಿಷ್ಠೆ, ಅಭಿಮಾನ, ಭಾವಾವೇಶ, ಭಿರುಚಿ, ಆಸಕ್ತಿ, ವ್ಯಾಮೋಹ, ಅಭಿನಿವೇಶ — ಇವೆ ್ಲವೂ ಆತನ ಮನೋದಾಸ್ಯಕ್ಕೆ ಕಾರಣವಾಗುವ “ ಅರ್ಥ ” ಳಾಗಬಲ್ಲವು. ಈ ಕೆಳಗಿನ ಒಂದು ವಿನೋದ-ಸಂವಾದ ದರದೊಂದು ಪರಿಚಯ ಕೊಡಬಹುದು :

ಮಗ ತನ್ನ ಸಾಮಾನ್ಯ ಜ್ಞಾನವನ್ನು ಬೆಳೆಸಿಕೊಳ
ಬೇಕೆಂಬ ಹಟದಿಂದ ತಂದೆಯನ್ನು ಕೇಳಿದ : “ ಅಪ್ಪಾ
ಧರ್ಮಾಂತರವೆಂದರೇನು ? ”

ತಂದೆ ಹೇಳಿದ : “ ಮಗು, ಯಾವನೊಬ್ಬನ
ಬೇರೊಂದು ಧರ್ಮ ಬಿಟ್ಟು ನಮ್ಮ ಧರ್ಮಕ್ಕೆ ಬಂದ
ಅದಕ್ಕೆ **ಧರ್ಮಾಂತರ**ವೆನ್ನುವರು, ತಿಳಿಯಿತೇ ? ”

ಮಗನ ಜ್ಞಾನಪಿಪಾಸೆ ಅಷ್ಟಕ್ಕೇ ತಣಿಯಲಿಲ್ಲ
“ ಹಾಗಾದರೆ ಅಪ್ಪಾ, ಯಾವನೊಬ್ಬ ನಮ್ಮ ಧರ್ಮಬಿಟ
ಬೇರೆ ಧರ್ಮಕ್ಕೆ ಸೇರಿದರೆ — ”

ತಂದೆ ತಾಳ್ಮೆಗೆಟ್ಟು ಗದರಿಸಿದ, “ ಛೀ ಮಂಕೆ,
ಮಾತೇ ಬಿಡು. ಅದು ಶುದ್ಧ **ಧರ್ಮದ್ರೋಹ**
ಅಂಥವರನ್ನು ನಂಬಬಾರದು. ದ್ರೋಹಿ ಮುಂಡೆ
ಮಕ್ಕಳು ! ”

ಒಟ್ಟಾರೆ ಎಲ್ಲವೂ ದೃಷ್ಟಿಕೋನದಲ್ಲಿದೆ. ಅದ
ಧರ್ಮಾಂತರ, ಇದು ಧರ್ಮದ್ರೋಹ. ಕ್ರಿಯೆ ಎರಡ
ಕಡೆಗೆ ಒಂದೇ. ಧರ್ಮವನ್ನು ಬದಲಿಸುವದು ಯಾ
ನಿಟ್ಟಿನಿಂದ ನೋಡುವೆವೆಂಬುದನ್ನು ಹೊಂದಿಕೊಂಡಿದೆ, –
ಆತ್ಮನೇಪದವೋ, ಪರಸ್ಮೈಪದವೋ ! ಹೀಗೆ ನವ
ವಿಚಾರಸರಣಿಯ ಸ್ವರೂಪವನ್ನೇ ಬೇರೆ ಮಾಡುವ ಶಕ್ತಿ ನವ

ಸ್ವಾರ್ಥದ, ಸ್ವಾಭಿಮಾನ — ಸ್ವಜನಾಭಿಮಾನಗಳ ಸೆಳೆತದಲ್ಲಿ ಇದೆ.

ಇದರದೇ ಇನ್ನೊಂದು ಸ್ವರೂಪ, ನಾವು ಸಲಹೆ ಕೇಳುವದರಲ್ಲಿ ಸಾಮಾನ್ಯವಾಗಿ ಪ್ರಕಟವಾಗುವದುಂಟು. ನಮ್ಮದೊಂದು ನಿರ್ಧಾರವಿದೆ — ಆಗಲಿದೆಯೆಂದು ಭಾವಿಸಿರಿ. ನಾವು ಮನೆ ಕೊಂಡುಕೊಳ್ಳಲಿದ್ದೇವೆ. ಆಗ ನಾವು ಕಂಡ ಕಂಡವರ ಬಳಿಗೆಲ್ಲ ಆ ಕುರಿತು ಸಲಹೆ ಕೇಳುತ್ತೇವೆ. ಆದರೆ ಆಶ್ಚರ್ಯವೆಂದರೆ ನಮಗೆ ಕೇಳಿದಲ್ಲೆಲ್ಲ ನಮ್ಮ ಅಭಿಪ್ರಾಯಕ್ಕೆ ಪುಷ್ಟಿಕೊಡುವ ಸಲಹೆಗಳೇ ದೊರೆಯುತ್ತವೆ! ಅಂದರೆ ನಿಜವಾಗಿಯೂ ನಮಗೆ ಪುಷ್ಟಿ ಸಿಗಬಹುದಾದ ತಾಣಗಳಲ್ಲಿಯೇ ನಾವು ಸಲಹೆ ಕೇಳುತ್ತೇವೆ — ಅದೂ ಅಭಾವಿತವಾಗಿ! ಪ್ರತಿಕೂಲ ಸಲಹೆ ಫಕ್ಕನೆ ದೊರೆತರೆ ನಮಗೆ ಸಮಾಧಾನವೇ ಆಗುವದಿಲ್ಲ. ಅಂದರೆ ನಮ್ಮ ಮನೋಗತಕ್ಕೆ ಅನುಕೂಲವಾಗುವ ಅನುಗೋಲಾಗುವ ಅಭಿಪ್ರಾಯಗಳನ್ನೆ ನಾವು ಅರಸುತ್ತಿರುತ್ತೇವೆ. ಮಾತಿನ ಜಾಣತನದಿಂದ, ಜಾಣತನದ ಮಾತಿನಿಂದ ಒಬ್ಬ ಅನುಭವಿಕನು ನಮ್ಮನ್ನು ಮನೆ ಕೊಂಡುಕೊಳ್ಳದಿರುವದೇ ಯೋಗ್ಯವೆಂದು ಮನಗಾಣಿಸಿದರೂ ನಮ್ಮ ಅಭಿಪ್ರಾಯ ಬದಲಾಗುವದಿಲ್ಲ. ನಮ್ಮ ಮನಸ್ಸು ತನ್ನ ಒಳ ನಿಲುಮೆಯಿಂದ ಕದಲುವದಿಲ್ಲ.

" A man convinced against his will
Is of the same opinion still. "

ಅಂದರೆ, " ತನ್ನ ಇಚ್ಛೆಯ ವಿರುದ್ಧ ಪೂರ್ತಿ ಮನಗಾಣಿಸಿ ದರೂ ಕೊನೆಗೂ ಮನುಷ್ಯ ಅದೇ ಮೂಲ ಅಭಿಪ್ರಾಯದ ವನೇ ಉಳಿಯುತ್ತಾನೆ. "

## ೫ " ನಮ್ಮ ಜಗತ್ತಿ " ನ ಅಭಿನಿವೇಶ

ಇದರ ಇನ್ನೊಂದು ಪರಿಣಾಮವೇನೆಂದರೆ, ನಮ್ಮಂತೆಯೇ ವಿಚಾರವಿದ್ದ, ನಮ್ಮ ಒಲವಿಗೆ ಓಗುಡುವ ನಾಲ್ಕು ಮಂದಿ ಸಿಕ್ಕರೆ ಸಿಗುವಂತಿದ್ದರೆ ಸರಿ; ಅದೇ ನಮ್ಮ ಜಗತ್ತು, ಅಖಿಲ ಪ್ರಪಂಚ. " ಇಡಿಯ ಲೋಕಕ್ಕೇ ಗೊತ್ತು ", " ಊರಿಗೆ ಊರೇ ಹೊಗಳುತ್ತದೆ ನನ್ನ ಕೃತಿ ಯನ್ನು ", " ಊರಲ್ಲಿ ಮೊಗವೆತ್ತಿ ತಿರುಗದಂತೆ ಆಗಿದೆ ಆ ಪಾಪಿಗೆ ! " — ಎಂದೆಲ್ಲ ನಾವು ಆಡಿಕೊಳ್ಳುವಾಗ ನಾವು ಒತ್ತಿ ಹೇಳುವ ಆ " ಲೋಕ " ಆ " ಊರು " ನಿಜವಾದ ನಕಾಶೆಯಮೇಲಿನ ಲೋಕವೂ ಅಲ್ಲ, ಊರೂ ಅಲ್ಲ. ನಮ್ಮ ನಮ್ಮ ಪರಿಮಿತ, ಪ್ರಜ್ಞಾಪ್ರಪಂಚ — ನಾವು ಬಲ್ಲ ನಮ್ಮನ್ನು ಬಲ್ಲ ಕೆಲವರ ಗುಂಪು.

ಈ ಗುಂಪಿನ ದಾಸ್ಯ ನಮ್ಮಲ್ಲಿ ಎಂಥ ಧೀರನಿಗೂ ತಪ್ಪಿದ್ದಲ್ಲ. ಪ್ರತಿಯೊಬ್ಬನೂ ತನ್ನ ನಡೆ, ನುಡಿ, ನೋಟ ನಿಲುಮೆಗಳು ತನ್ನ ಗುಂಪಿನ ಮನ್ನಣೆಗೆ ಪಾತ್ರವಾಗು ವಂತೆಯೇ ಇಟ್ಟುಕೊಳ್ಳಲು, ತಿದ್ದಿಕೊಳ್ಳಲು ಹೆಣಗು ತ್ತಿರುತ್ತಾನೆ. ಅತ್ಯಂತ ಸ್ವತಂತ್ರ ವಿಚಾರದವನೆಂದು ಎ

ತಟ್ಟಿ ನಿಂತು, ತನ್ನ ಸಮಾಜದ ಅಪವಾದವನ್ನು, ಸಾರ್ವ
ಜನಿಕರ ಅಪಪ್ರಚಾರವನ್ನು ಶಾಂತವಾಗಿ ಸಹಿಸುವ ಎದೆ
ಗಾರನೂ ತನ್ನ ಕಲ್ಪನೆಯಲ್ಲಿ, ಎಣಿಕೆಯಲ್ಲಿ ಆ ಸಮಾಜ-
ಸಾರ್ವಜನಿಕರ ಪರಿಸರದ ಹೊರಗಿನ ತನ್ನ ವಿಚಾರಕ್ಷೇತ್ರದ
ಮುತೀಯ ವಲಯದ ಅಭಿಪ್ರಾಯ ಅಭಿಮತಗಳನ್ನು
ಲೆಕ್ಕಿಸಿಯೇ ಅವುಗಳ ಮೆಚ್ಚಿಗೆಯ ಭರವಸೆಯಿಂದಲೇ
ಹಾಗೆ ಒಂಟಿಯಾಗಿ ಗುಂಪುಗೇಡಿಯಾಗಿ ವರ್ತಿಸುತ್ತಾನೆ.
ಭವಭೂತಿ ತನ್ನ ನಾಟಕವನ್ನು ಮೆಚ್ಚುವವನು "ಉತ್ಪತ್ಸ್ಯತೇ
ಮಮ ಚ ಕೋಪಿ ಸಮಾನ ಧರ್ಮಾ। ಕಾಲೋ ಹಿ
ಅಯಂ ನಿರವಧಿಃ ವಿಪುಲಾ ಚ ಪೃಥ್ವೀ ॥" ಎಂದಿದ್ದನು.
ಈ ಘೋಷಣೆ ಎಲ್ಲ ಕಾಲದ ಎಲ್ಲ ದೇಶಗಳ ಹೊಸಹಾದಿ
ಹಿಡಿಯುವ ಹುದ್ದರಿಗಳ ಪ್ರತಿಜ್ಞೆ — ಚೂಣಿಯ ಕಹಳೆ.
ರುತ ಪ್ರವಾಹದಿಂದ ಸಿಡಿದು ನಿಲ್ಲುವ, ಪ್ರವಾಹದ ವಿರುದ್ಧ
ಒಂಟಿ ಕೈಯಿಂದ ಈಜುತ್ತ ಹೊರಟ ವಿಚಾರವೀರನು,
ಕ್ರಾಂತಿಕಾರಿಯು; ಪ್ರವಾದಿಯು, ನವಮತವಾದಿಯು,
ತನ್ನ ಮಟ್ಟಿಗೆ ಏಕಾಕಿಯಾಗಿರುವದಿಲ್ಲ. ತಾನೊಬ್ಬ ಅಂಥ
ವಿಚಾರಸರಣಿಯ, ಮತಪ್ರಣಾಲಿಯ, ಕ್ರಾಂತಿಕಾರಿ ವರ್ಗದ,
ಸತ್ಯಶೋಧಕರ ಪರಂಪರೆಗೆ ಒಪ್ಪಿದ ಒಳಪಟ್ಟ ಬಂಟ
ನೆಂದೇ, ಬೇರೆ ಕಾಲದ, ಬೇರೆ ದೇಶದ, ಬೇರೆ ತಲೆಮಾರಿನ
ತನ್ನ "ಸಮಾನಧರ್ಮ" ದ ಅನಂತಯಾತ್ರೆಯಲ್ಲಿ ಜತೆ
ಗಾರನೆಂದೇ ಆತ ಆತ್ಮ ವಿಶ್ವಾಸದಿಂದ ಮುಂದು
ವರಿಯುತ್ತಾನೆ.

ಅಂದರೇನು ? " ಇಂದ್ರಿಯ ಗ್ರಾಮ " ದಂತೆ, ಇಚ್ಛಾ ವಿಲಾಸವು, ಇಷ್ಟಾಭಿಪ್ರಾಯದ ಅಭಿನಿವೇಶವು ಎಷ್ಟು ಬುನಾದಿಯದೋ ಅಷ್ಟೇ ಬಲವಾದದ್ದು. ಅದು ಎಂಥ " ಪಂಡಿತ " ನ " ಅಪಕರ್ಷ " ಕ್ಕೂ ಕಾರಣವಾಗಬಲ್ಲದು. ಈ ದೃಷ್ಟಿಯಿಂದ ನೋಡಿದಾಗ ವಿಚಾರವಾದಿಯು ಪ್ರಾಮಾಣಿಕನಿದ್ದಷ್ಟು ತನ್ನ ವಿಚಾರ ಉಚಿತ–ಖಚಿತವೆಂದು ಎಷ್ಟೆಷ್ಟು ಅಂಟಿಕೊಳ್ಳುತ್ತಾನೆಯೋ, ಅಷ್ಟಷ್ಟು ಆ ವಿಚಾರದ ಮೂಲದ ಕುರಿತು, ಬೆಲೆಯ ಕುರಿತು ಸಂದೇಹ ಪಟ್ಟು ಕೊಳ್ಳುವದು ಅವನ ಮಾನಸಿಕ ಆರೋಗ್ಯಕ್ಕೆ ಹಿತ ವಾದದ್ದು.

ಒಂದು ವಾದದ, ವಿಚಾರದ, ಮತದ, ಅಭಿಪ್ರಾಯದ, ತತ್ತ್ವದ ಕುರಿತು ನಾವು ಇಟ್ಟುಕೊಳ್ಳುವ ಹಟ, ಪಟ್ಟು ಕೊಳ್ಳುವ ಹವ್ಯಾಸ ಅದರ ಅಸಮಂಜಸತನದ ಅವಿವೇಕದ ಹಾಗು ಅಸತ್ಯತೆಯ ಅಳತೆಗೋಲೆಂದು ಧಾರಾಳವಾಗಿ ಹೇಳಬಹುದು. **ಸತ್ಯಕ್ಕೆ ಅಭಿನಿವೇಶ, ಆವೇಶ, ಆಗ್ರಹ ಇಲ್ಲವೆ ಆತ್ಮಸಮರ್ಥನೆಯ ಅಗತ್ಯವಿಲ್ಲ.** ಸಂಪೂರ್ಣ ಸತ್ಯ, ಶುದ್ಧ ಸತ್ಯ ಯಾರಿಗೂ ಯಾವಾಗಲೂ ಎಟಕಿಲ್ಲ.

" ನಿಜವ ಕಂಡವರಿಲ್ಲ
ನಿಜ ಕಾಣುವಂತಿಲ್ಲ
ನಿಜವೇನು ಮಳಲ ಹುಡಿಗಿಂತ ಕೀಳೇ ?

ನಿಜವ ಕಂಡಿಹೆನೆಂಬ
ಕಣ್ಣ ಜಂಭದ ಹುಂಬ
ಮಳಲ ಹುಡಿಗುಟ್ಟೇನು ಕಣ್ಣ ಕೂಳೇ ?" ಎಂದು

ತಮ್ಮ ಆರ್ಷವಾಣಿಯ ಅಧಿಕಾರದಿಂದ ಕವಿವರ್ಯ ಬೇಂದ್ರೆಯವರು ಕೇಳುವದನ್ನು ಯಾರು ಅಲ್ಲಗಳೆದಾರು ? ಇನ್ನೂ ಮಳಲ ಹುಡಿಯು ಗುಟ್ಟು ಕಣ್ಣ ಕೂಳಾಗಿಲ್ಲ; ಸತ್ಯವೇನು ಮಳಲ ಹುಡಿಗಿಂತ ಕೀಳಲ್ಲ; ಸತ್ಯ ಕಂಡಿಹೆನೆಂಬ ಕಣ್ಣ ಜಂಭ ಶುದ್ಧ ಹುಂಬತನ- ಇದೆಲ್ಲವೂ ಸತ್ಯವೇ. ಆದರೂ ತಾನು ಕಂಡದ್ದು ಸತ್ಯದ ಒಂದು ಅಂಶವೆಂದು ಮನಗಂಡಾಗ ಅದನ್ನು ಕುರಿತು ಪ್ರತಿಪಾದನೆ ಅಗತ್ಯವಿರುವದಿಲ್ಲ, ಕೇವಲ ವಿವೇಚನೆ ಸಾಕಾಗುತ್ತದೆ. ತ್ರಿಕೋನದ ವ್ಯಾಖ್ಯೆ, ಪೆನಿಸಿಲಿನ್ನಿನ ಗುಣ, ಗುರುತ್ವಾಕರ್ಷಣದ ಮಂಡನೆ, ಅಣುವಿಜ್ಞಾನದ ಪ್ರಮೇಯ — ಇತ್ಯಾದಿ ಶಾಸ್ತ್ರೀಯ ವೈಜ್ಞಾನಿಕ ಸತ್ಯಗಳ ಕುರಿತು ಚರ್ಚೆ ಮಾಡುವವರು ಕೂಗಾಡುವದಿಲ್ಲ, ರೇಗಾಡುವದಿಲ್ಲ; ಹಿಗ್ಗಾಮುಗ್ಗಾ ಹೆಣಗಾಡುವದೂ ಇಲ್ಲ. ಬಣ್ಣವಿಲ್ಲದ ಭಾಷೆ, ಕಾವಿಲ್ಲದ ಭಾಷಣ, ವಿಕಾರವಶವಾಗದ ವಿಚಾರಸರಣಿ, ಉದ್ವೇಗಕ್ಕೆ ಇಂಬುಗೊಡದ ಊಹಾಪೋಹ — ಶಾಸ್ತ್ರೀಯ ಪರಿಷತ್ತುಗಳಲ್ಲಿ ಕಂಡುಬರುವದಿಲ್ಲವೇ ? ಭೌತಿಕ ಶಾಸ್ತ್ರಗಳನ್ನು ಬಿಟ್ಟು ಈಚೆಗೆ ಬಂದಂತೆ, ಸಮಾಜ ಶಾಸ್ತ್ರಗಳ ಶಾಖೋಪಶಾಖೆಗಳಲ್ಲಿ ಎಡವಿ ಬೀಳಹತ್ತಿದಂತೆ ಸತ್ಯಕ್ಕಿಂತ ಮತ, ಮಂಡನೆಗಿಂತ ಖಂಡನೆ, ಪ್ರಕಾಶಕ್ಕಿಂತ ಪ್ರಚಾರ, ಅಭಿರುಚಿಗಿಂತ ಅಭಿನಿವೇಶ, ಜ್ಞಾನಕ್ಕಿಂತ ಶ್ರದ್ಧೆ, ತತ್ತ್ವಕ್ಕಿಂತ

ವ್ಯಕ್ತಿ — ಹೀಗೆಲ್ಲ ಅವಾಂತರ ತಾರತಮ್ಯಗಳು ತಲೆದೋರತೊಡಗುವದನ್ನು ನಾವು ಕಾಣುತ್ತೇವೆ.

ರಾಜಕಾರಣ ಅಸಮಂಜಸ, ಅಶಾಸ್ತ್ರೀಯ, ಅಯುಕ್ತ, ವಿಚಾರಗೇಡಿ ವ್ಯವಹಾರಕ್ಕೆ ತವರು. ಅಲ್ಲಿ ಇಚ್ಛೆಯೇ ತತ್ತ್ವವಾಗಿ, ಅಹಂಕಾರವೇ ಅಧಿಕಾರವಾಗಿ, ಹಟವೇ ಕರ್ತವ್ಯವಾಗಿ, ಉಪಾಯವೇ ವೇದಾಂತವಾಗಿ, ಅಲ್ಪವೇ ಮಹತ್ತಾಗಿ, ಬೇಡಿಕೆಯೇ ಬೆಲೆಯಾಗಿ, ಸ್ವಪ್ರತಿಷ್ಠೆಯೇ ಸತ್ಯನಿಷ್ಠೆಯಾಗಿ ತಾಂಡವವಾಡುತ್ತದೆ. ಶತಮಾನಗಳಿಂದ ಅಂಧ ಶ್ರದ್ಧೆ, ಅಜ್ಞಾನ, ದಾಸ್ಯ, ಹತಾಶೆ, ವೈರಾಗ್ಯ, ಆತ್ಮವಂಚನೆ, ನ್ಯೂನಗಂಡ, ಮೂಢಭಾವನೆ, ವಿಭೂತಿಪೂಜೆ ಮತ್ತು ಉದರಭರಣ — ಇವನ್ನೆ ಪುರುಷಾರ್ಥವೆಂದೂ, ಪರಮಾರ್ಥವೆಂದೂ ಭಾವಿಸಿ ಅನುಭವಿಸಿ ಬದುಕಿಬಂದ ಜನತೆಯಲ್ಲಿ ರಾಜಕೀಯ ಸ್ವಾತಂತ್ರ್ಯದ ಹಂಬಲ ಒಂದೇ ಅಗತ್ಯದ ಒತ್ತಾಯವಾದಾಗ ರಾಜಕಾರಣಕ್ಕೆ ಎಲ್ಲೂ ಇಲ್ಲದ ಎಂದೂ ಸಲ್ಲದ ಮಹತ್ವ ಬರುತ್ತದೆ. ಅದೊಂದು ಸಾಮಾಜಿಕ ಸನ್ನಿಪಾತವೇ ಆಗುತ್ತದೆ. ಅದರಿಂದ ಹದಗೆಟ್ಟ ವಾತಾವರಣದಲ್ಲಿ ವಿಚಾರವಾದಕ್ಕೆ, ಬುದ್ಧಿಪ್ರಾಮಾಣ್ಯಕ್ಕೆ, ತರ್ಕಶುದ್ಧ ವಿಚಾರಸರಣಿಗೆ ಪ್ರಾಶಸ್ತ್ಯವಿರಲಿ, ಪ್ರವೇಶ ದೊರೆಯುವದೂ ವಿರಳ !

## ೬ ಆತ್ಮವಂಚಕ ತರ್ಕ

ಇಂಥ ವಾತಾವರಣದಲ್ಲಿ ಬೆಳೆದ ಮೇಧಾವಿಗಳೂ,

ಾಧ್ಯಾಪಕರೂ, ಪಂಡಿತರೂ ಆದೇಕೆ ವಿಜ್ಞಾನಿಗಳೆನ್ನು
ರವರೂ ವೈಜ್ಞಾನಿಕ ದೃಷ್ಟಿಯನ್ನು ಪಳಗಿಸಿಕೊಳ್ಳುವದು
ಡಮೆ.

## ೭ ಬಗೆಗುದುರೆಯು ಕಣ್ಣು ಪಟ್ಟಿ

ಅಂದರೆ ಈ ಸುಶಿಕ್ಷಿತರ, ವ್ಯಾವಸಾಯಿಕ ವಿಚಾರ
ಜ್ಞರ ಮನಸ್ಸುಗಳಿಗೂ ವಿಶಿಷ್ಟವೂ, ಆವಿಷ್ಟವೂ ಆದ
ಕಣ್ಣು ಪಟ್ಟಿ " ( Blinkers ) ಗಳುಂಟು. ಅವುಗಳ
ಚೆಗೆ, ಅವುಗಳನ್ನು ಸಡಲಿಸಿ ಅವರ ವೈಚಾರಿಕ ದೃಷ್ಟಿ
ೋಡಲು ಒಪ್ಪುತ್ತಿಲ್ಲ. ಮರ್ಮ ಸ್ಥಳವನ್ನು ಸೋಂಕಿ
ೊಡನೆಯೇ " ಯತೋ ವಾಚೋ ನಿವರ್ತಂತೇ ಅಪ್ರಾಪ್ಯ
ುನಸಾ ಸಹ " ಎಂಬಂತೆ ಅವರ ಅವಸ್ಥೆ ಆಗುತ್ತಿದೆ.
ಜ್ಞರಲ್ಲಿ, ವಿಶೇಷಜ್ಞರಲ್ಲಿಯೇ ಈ ಮನೋರೋಗ ಆಳ
ಾಗಿದೆಯೆಂದಮೇಲೆ, ಪಾಮರರ, ಸಾಮಾನ್ಯರ ಮನಸ್ಸನ್ನು
ದು ಎಷ್ಟು ಬಲವಾಗಿ ಆಳಬಹುದು ! ಪ್ರಿಯವಾದ,
ಿರಪರಿಚಿತವಾದ, ಸಂಸ್ಕಾರಬಲದಿಂದ ಸ್ವಭಾವದಂತೆ ಆಗಿ
ೋದ, ಸಂಗತಿಗಳ ಕುರಿತು ನಮ್ಮ ವಿಚಾರ ನಿಚ್ಚಳವಾಗಿ
ಲಸ ಮಾಡುವದು ಕಡಮೆಯೇ. ನಮ್ಮ ಎಲ್ಲ ವಿದ್ಯೆ,
ಜ್ಞಾನ, ಅನುಭವ ಹಾಗೂ ಮೇಧಾಶಕ್ತಿ ಈ ಹಳೆಯ
ಗ್ರಹಿಕೆಗಳನ್ನು, ಮೈಯುಂಡ ಒಲವುಗಳನ್ನು, ನಮ್ಮ
ಪ್ರತಿಷ್ಠೆ – ಪ್ರಯೋಜನಗಳಿಗೆ ಒಂದಿಲ್ಲೊಂದು ರೀತಿಯಲ್ಲಿ
ಪೋಷಕವಾಗುವ ಪ್ರಚೋದನೆಗಳನ್ನು ಸಮರ್ಥಿಸ

ಲಿಕ್ಕಾಗಿಯೇ, ಸಾಧಾರವಾಗಿ ಸಾದರ ಪಡಿಸುವದಕ್ಕೋಸ್ಕ
ರವೇ ಒಳ್ಳೇ ಚುರುಕಾಗಿ ಸವಿರಾಗಿ ವಿನಿಯೋಗವಾಗುತ್ತವೆ
ಅದಕ್ಕಾಗಿ ಎಂಥ ಡೊಂಬರಮಣಿತವನ್ನಾದರೂ ನಾವು
ಮಾಡುತ್ತೇವೆ. ಕೊನೆಗೂ ನಮ್ಮ ವಿಚಾರಗೇಡಿತನವನ್ನು
ಮುಚ್ಚಿಕೊಳ್ಳಲಿಕ್ಕೆ ನಾವು — ಕಲಿತವರೆಂದು ಜಂಭ ಪಟ್ಟು
ಕೊಳ್ಳುವ ನಾವು -- ಹೂಡುವ ವಾದವೆಂದರೆ " Life is
not logic " ಅಂದರೆ, ಜೀವನವೆಂದರೇನು ತರ್ಕವಲ್ಲ.

ಆದರೆ ಅದಕ್ಕೇ ತರ್ಕವನ್ನು ನಾವು ಅಂಟಿಕೊಳ್ಳುವ
ಅಗತ್ಯ ಹೆಚ್ಚು. ಸೈಕಲ್ ಎಷ್ಟೇ ವೇಗದಿಂದ ನುಗ್ಗಿದರೂ
ಅದಕ್ಕೆ ಬಲಿಷ್ಠವಾದ ' ಬ್ರೇಕು ' ಅಷ್ಟೇ ಅಗತ್ಯ. ಸೈಕಲ್
ಅಂದರೆ ಬರಿಯ ಬ್ರೇಕಲ್ಲ. ಬಾಳಿನಲ್ಲಿ ಬುದ್ಧಿಯ ಕ್ಷೇತ್ರ
ಕಡಮೆ, ವಿಕಾಸ ಇತ್ತಣದು, ಪ್ರಭಾವ ಆಳವಲ್ಲ. – ಇದೆಲ್ಲ
ನಿಜ, ಇತಿಹಾಸಸಿದ್ಧ; ಅಡಿಗಡಿಗೂ ಅನುಭವಕ್ಕೆ ಬರುವ
ಮಾತು. ಆದರೆ ಆ ಮೂಲಕ ಬುದ್ಧಿಯ – ಅದರ
ಕ್ರಿಯೆಯಾದ ತರ್ಕದ – ವಿನಿಯೋಗ ನಿಷಿದ್ಧ, ಅಬದ್ಧ
ಅಥವಾ ಅನಿಷ್ಟವೆಂದು ಹೇಗೆ ಸಿದ್ಧವಾಗುವದು ? ಒರೆಗಲ್ಲು
ಬಂಗಾರವನ್ನು ಹುಟ್ಟಿಸಲಾರದೆಂಬ ಮಾತ್ರಕ್ಕೆ ಬಂಗಾರಕ್ಕೆ
ಒರೆಗಲ್ಲೆ ಬೇಡ — ಎಂದು ವಾದಿಸುವದರಲ್ಲಿ ಚಾತುರ್ಯ
ವಿದ್ದರೂ ವಿವೇಕವಿಲ್ಲ. ನಮ್ಮ ಜೀವನದ ಮೇಲೆ
ಬುದ್ಧಿಯ, ತರ್ಕದ, ವಿವೇಕದ, ತಾರತಮ್ಯ ದೃಷ್ಟಿಯ
ಸಯುಕ್ತಿಕ ವಿಚಾರಸರಣಿಯ ಪ್ರಭಾವ ಹೆಚ್ಚಾಗಬೇಕು —
ಅಷ್ಟೇ ಅಲ್ಲ, ಪ್ರಭುತ್ವ ಸ್ಥಾಪಿತವಾಗಬೇಕು.

ಹಾಗೆ ಆಗದಿರುವದಕ್ಕೆ ಇನ್ನೊಂದು ಬಲವಾದ ತೊಡಕು ನಮ್ಮ ಮನೋದೌರ್ಬಲ್ಯ. ಮೇಲೆ ಹೇಳಿದ ಎಲ್ಲ ತೊಡಕುಗಳು ಇಲ್ಲದಿರುವಲ್ಲಿಯೂ ನಮಗೆ ಈ "ಕ್ಷುದ್ರಂ ಹೃದಯ ದೌರ್ಬಲ್ಯಂ" ಕಾಡುವದು — ಮತಿಯನ್ನು ಕುಂಠಿತ ಮಾಡುವದು. ಈ ದೌರ್ಬಲ್ಯ ಬರಿಯ ಮೋಹವಶವಲ್ಲ, ವಿಕಾರವಶವೂ ಅಲ್ಲ. ಇದು ಶುದ್ಧ ಮನೋಗ್ಲಾನಿ, ಮಾನಸಿಕ ದಣಿವು. ನಾವು ಬೇಸತ್ತಾಗ, "ದುಡಿದುಡಿದು ಸತ್ತಾಗ" ಕೈಸಾಗದೆ ಕೆಲಸವಾಗದೆ ಸೋತಾಗ, ಪ್ರಬಲವಾದ ನೋವಿನಿಂದ ಗಾಸಿಯಾದಾಗ, ದೀರ್ಘಕಾಲದ ಜಡ್ಡಿನಿಂದ ಎದ್ದಾಗ, ತೀವ್ರವಾದ ದುಃಖ, ಉಗ್ರವಾದ ಹತಾಶೆ, ತೀಕ್ಷ್ಣವಾದ ಭಂಗವೇ ಮೊದಲಾದ ಘೋರ ಆಘಾತಕ್ಕೆ ಬಲಿಯಾದಾಗ ನಮ್ಮ ಬುದ್ಧಿಗೆ ಮಂಕು ಕವಿಯುತ್ತದೆ — ಸತತವಿಚಾರದ ಶ್ರಮ ಬೇಡವೆನಿಸುತ್ತದೆ. ಮನಸ್ಸಿನ ಈ ಅಶಕ್ತಿ ಈ ಆಲಸ್ಯ ತಿಳಿಗೇಡಿತನಕ್ಕೆ ಕುರುಡು ನಂಬಿಗೆಯ ಹಳೆಯ ಸಂಸ್ಕಾರಕ್ಕೆ ಕಾಲಿದಾಸನು ಉಲ್ಲೇಖಿಸಿದ "ಪರ ಪ್ರತ್ಯಯ ನೇಯ ಮೂಢತೆ"ಗೆ ಒಮ್ಮೆಲೆ ಅಥವಾ ಮೆಲ್ಲಗೆ ಅನುವು ಮಾಡಿಕೊಡುತ್ತದೆ.

## ೮ ಮನೋದೌರ್ಬಲ್ಯ

ಆದರೆ ಇಂಥ ಸಾವಿರಾರು ಉದಾಹರಣೆಗಳಲ್ಲಿ ನಾವು ಗಮನಿಸಬೇಕಾದ ಅಂಶವಿಷ್ಟೇ. ಒಂದು ವಿಷಮಜ್ವರ, ಒಂದು ನಿಪುತ್ರಿಕತೆ, ಒಂದು ವೃದ್ಧಾಪ್ಯ — ಇವುಗಳಿಂದೇನೇ

ಆ ಜ್ಞಾನಿಗಳು ಒಮ್ಮೆಲೆ ಪರಮ ನಾಸ್ತಿಕತೆಯಿಂದ ಪರಮ ಆಸ್ತಿಕತೆಗೆ, ಬುದ್ಧಿವಾದದಿಂದ ಶ್ರದ್ಧಾಭಾವಕ್ಕೆ ಬಂದು ಬಿಟ್ಟದ್ದು ನಿಜವಾದರೆ, ಅವರ ಆ ಬುದ್ಧಿವಾದವೂ ಆ ನಾಸ್ತಿಕತೆಯೂ ಎಷ್ಟು ಆಳವಾಗಿದ್ದೀತು ? ಏನು ಭದ್ರವಾಗಿದ್ದೀತು ? ಬುದ್ಧಿಪೂರ್ವಕ ತಿಳುವಳಿಕೆ ತಿದ್ದದ ಕ್ರಿಯೆ ಕಷ್ಟದ್ದು, ಕೃಷಿಯಿಂದ ಕಲಿತುಕೊಳ್ಳತಕ್ಕದ್ದು. ಆದರೆ ಬಾಲ್ಯದಿಂದಲೂ, ಕುಲಪರಂಪರೆಯಿಂದಲೂ, ತಾನು ಬೆಳೆದ ವಾತಾವರಣದ ಪ್ರತಿಯುಸಿರಿನಿಂದಲೂ ಹೀರಿಕೊಂಡ, ಪಡೆದುಬಂದ ಸಂಸ್ಕಾರಗಳು, ಅವುಗಳಿಂದ ರೂಪಗೊಂಡ ಮನೋಭಾವವು, ಹೃದಯಾನುಮಾನವು ಎಷ್ಟು ಹಳೆಯದು ? ಬೇರೂರಿ ನಿಂತದ್ದು ? ಬದುಕಿನ ಒಳಮೈಗೆ ಹಂದರವಾಗಿ ಹಬ್ಬಿದ್ದು ? ಬುದ್ಧಿ ಪ್ರಯತ್ನದಿಂದ ಆ ಸಂಸ್ಕಾರಬಲದ ಆಕರ್ಷಣೆಯನ್ನು ಮೆಟ್ಟಿನಿಂತು ಮನುಷ್ಯ ಪ್ರಾಜ್ಞನೋ, ಜ್ಞಾನಿಯೋ ಆಗುತ್ತಾನೆ. ಅವನ ಬುದ್ಧಿಯ ಪೂರ್ಣ ಶಕ್ತಿಯು ಪೂರ್ಣ ಚಟುವಟಿಕೆಯಿಂದ ಕೆಲಸ ಮಾಡುತ್ತಿರುವಾಗಲೇ ಮಾಡುತ್ತಿರುವನಕವೇ ಆತ ಕಟ್ಟಿಕೊಂಡ ಧಾರಣೆ, ಇಟ್ಟುಕೊಂಡ ಧ್ಯೇಯ ಅವನ ನಿಜವಾದ ನಿಷ್ಠೆ ಹಾಗೂ ನೆಮ್ಮುಗೆ. ಬುದ್ಧಿಯ ಹಿಡಿತ ಕಾರಣಾಂತರಗಳಿಂದ, — ಬೇನೆ, ಭಯ, ಮುಪ್ಪು, ಕಳವಳ, ಬಯಕೆ, ಜಾಡ್ಯ — ಇವುಗಳಿಂದ ಸಡಿಲಾಗಿ, ವಿಚಾರಧಾರೆ ಮೊಂಡಾಗಿ, ತರ್ಕದ ಮೊನೆ ಮುರಿದು ಅವನಲ್ಲಿ ಹಳೆಯ ಮಾನಸಿಕ ಚಟಗಳು ಮತ್ತೆ ಮೇಲಾದರೆ ಅದು ಅವನ ವಿಕಾಸದ ಪಕ್ವತೆಯಲ್ಲ, ಭ್ರಷ್ಟತೆ.

ಆದ್ದರಿಂದ ಮನಸ್ಸನ್ನು ಆವರಿಸುವ ಈ ವೈಕಲ್ಯ, ೖಥಿಲ್ಯ, ಮಾಲಿನ್ಯ, ದೌರ್ಬಲ್ಯಗಳನ್ನು ನಾವು ಸಕಾಲದಲ್ಲಿ ುರುತಿಸಬೇಕು. ನಮ್ಮ ಇಂದ್ರಿಯ ಬುದ್ಧಿ ಶಕ್ತಿಗಳು ಪ್ರತಿಹತವಾಗಿರುವಾಗ ತಿಳುವಳಿಕೆಯ ಪೂರ್ಣ ಹೊಣೆ ಾರಿಕೆ ಎದೆಗಾರಿಕೆಗಳಿಂದ ಬದುಕಿನ ನೀತಿಯ ಕುರಿತು ಚಾರಿಸಲು ನಾವು ಸರ್ವಥೈವ ಸಮರ್ಥರಿರುವಾಗ ಭಿಪ್ರಾಯಪಟ್ಟ ಮತಗಳೇ ನಮ್ಮ ನಿಜವಾದ ಶುದ್ಧವಾದ ರ್ಕಸಿದ್ಧವಾದ ಮತಗಳೆಂದು ನಾವು ಹಿಡಿಯತಕ್ಕದ್ದು. ಲ್ಲವಾದರೆ ತಪ್ಪಿಗೂ ತಿದ್ದಿಗೂ ತಾರತಮ್ಯವೇ ಉಳಿಯ ಾರದು !

ನಮ್ಮ ಮನಸ್ಸಿಗೆ ಜಾಡ್ಯ, ಸ್ವಾಭಾವಿಕ — ಜಡ ಸ್ತುವಿಗೆ ಸ್ಥಿತಿಸ್ಥಾಪಕತ್ವ ಇದ್ದಂತೆ. ಆ ಮೂಲಕ ಗುವದೇನೆಂದರೆ, ನಾವು ನಮಗೇ ಗೊತ್ತಾಗದಂತೆ — ೊತ್ತಾದಾಗಲೂ ಒಪ್ಪಿಕೊಳ್ಳದಷ್ಟು ! — ಹೊರಗಿನ ಹೆರ ರ, ಹಳೆಯ ಇಲ್ಲವೆ ಹಿರಿಯರ ಸೂಚನೆಗಳಿಗೆ, ಸೂಕ್ಷ್ಮ ಂಕೇತಗಳಿಗೆ ಆಗಾಗ್ಗೆ ಬಲಿಯಾಗುತ್ತೇವೆ ! ಆಧುನಿಕ ುಗದ ಪ್ರಚಾರತಂತ್ರವೇ ಈ ಸೂಕ್ಷ್ಮ ಸೂಚನೆಗಳ ತ್ತ್ವದಮೇಲೆ ನಿಂತ ಯೋಜನಬಾಹುವಾದ ಯಂತ್ರ ! ಮ್ಮ ಅಹಂಕಾರ ಪ್ರತ್ಯಕ್ಷ ಸಲಹೆಯ ಬಲಾತ್ಕಾರವನ್ನೂ ್ರತಿಭಟಿಸಬಹುದು; ಆದರೆ ಈ ಸೂಕ್ಷ್ಮ ಸೂಚನೆಯ ಪುರ ಸ್ಕಾರವನ್ನು ಅಂಧಾನುಕರಣದಿಂದ ಸ್ವಾಗತಿಸುವದು ! ೊರಳಿಗೆ ಹಗ್ಗಹಾಕಿ ಎಳೆದರೆ ಬಾರದ ಗಟ್ಟಿಗ ಹಾರ

ಹಾಕಿದರೆ, ಚಪ್ಪಾಳೆ ಬಾರಿಸಿದಲ್ಲಿ ಲೋಕಾಭಿರಾಮವಾಗಿ
ನಗುತ್ತ ಹಿಂಬಾಲಿಸುವನು ! ಅದೇ ರೀತಿ ಮನಸ್ಸು
ವಿರೋಧ, ಪ್ರತಿಭಟನೆ, ಘರ್ಷಣೆಗಳನ್ನು ತಪ್ಪಿಸುವ ನುಣ್ಣ
ಗಿನ ದಾರಿಯನ್ನೆ ( Line of least resistance )
ಅರಸುವದು. ಸಾರ್ವಜನಿಕ ಅಭಿಪ್ರಾಯ, ಸಂಪ್ರದಾಯ
ಶರಣತೆ, ಪ್ರಶಂಸಾಪ್ರಿಯತೆ ಈ ಮೂರು ಧೂರ್ತರು
ನಮ್ಮನ್ನು ಅಡ್ಡಗಟ್ಟಿ ನಾವು ತಲೆಗೆತ್ತಿ ತಂದ ಎಂಥ ಓತನ್ನೂ
ನಾಯಿಯೆಂದು ಹೇಳಿದರೂ ನಾವು ಬಾಲ ಅಲ್ಲಾಡಿಸುತ್ತ
ಅದನ್ನು ಬಿಟ್ಟು ಕೊಡಬಲ್ಲ ವಿಚಾರವಂತ ವಿಪ್ರರು !

ಹೀಗಾಗಿ ನಮಗೆ ಪ್ರಿಯವೇ ಹಿತವೆನಿಸುವದು,
ಪ್ರಶಂಸೆಯೇ ವಿಮರ್ಶೆಯೆನಿಸುವದು, ಅವಶ್ಯಕತೆಯೇ
ಸದ್ಗುಣವೆನಿಸುವದು. ನಮಗೆ ನಮ್ಮ ನೆರಹೊರೆಯ
ನೀತಿ, ನಿತ್ಯದ ಪತ್ರಿಕೆಯ ವಿಚಾರ, ಹೆಂಡತಿಯ ಅಭಿರುಚಿ,
ಕಚೇರಿಯ ಕಡ್ಡಾಯ, ಚಲಚ್ಚಿತ್ರದ ಚಾಕಚಕ್ಯ, ಪುಢಾರಿ
ಗಳ ಹಟವಾದ, ಗೆಳೆಯರ ಚಟ, ವರಿಷ್ಠರ ನಿರ್ಣಯ
ಮತ್ತು ನಂಬುವವರ ಮತ ನಮ್ಮದೇ ಅನಿಸುವದು
ಇದರಿಂದ ನಮ್ಮ ಮನಸ್ಸು ನಮ್ಮದಾಗಿರುವದಿಲ್ಲ. ಹೆರ
ವರ ವಸ್ತುಗಳಿಂದ ನಮ್ಮ ಕೋಣೆ ಸಿಂಗರಿಸಿದಂತೆ ಅಥವಾ
ಮೊದಲೆ ಸಕಲ ಉಪಸ್ಕರಗಳಿಂದ ಸಜ್ಜಾದ ಕೋಣೆಯನ್ನು
ಬಾಡಿಗೆಗೆ ನಮ್ಮದಾಗಿ ಭಾವಿಸಿದಂತೆ ನಮ್ಮ ಮನಸ್ಸಾಗಿ
ರುತ್ತದೆ ! ಹೀಗೆ ನಮ್ಮ ಮಾನಸಿಕ ದೌರ್ಬಲ್ಯವೇ ನಮ್ಮ
ಮಾನಸಿಕ ದಾಸ್ಯಕ್ಕೆ ಕಾರಣವಾಗುತ್ತದೆ — ಆಗಿದೆ.

## ೯ ಭಾವೋದ್ರೇಕ

ಈ ದೌರ್ಬಲ್ಯದ ಇನ್ನೊಂದು ಫಲವೆಂದರೆ ನಮ್ಮ ಬುದ್ಧಿ ಕೆಲವೆಡೆಗಳಲ್ಲಿ ಸುಮ್ಮನೆ ಅಥವಾ ಬಿಮ್ಮನೆ ಕುಂಠಿತ ವಾಗುವದು. ಕೆಲವು ಸಂಗತಿಗಳ ಎದುರಿಗೆ ನಮ್ಮ ಮನಸ್ಸು ಅನವಶ್ಯಕ ಅಥವಾ ಅವಾಸ್ತವ ಭಾವೋದ್ರೇಕಕ್ಕೆ ವಶವಾಗಿ, ಕಾರಣಕ್ಕೂ ಮಿತಿಮೀರಿ ಕರಗುವದು. ಆ ಆಕುಲಾಕೃತಿಯು ತಿಳಿಯಾದ ವಿಚಾರವನ್ನು ಕಲುಷಿತವಲ್ಲ ದಿದ್ದರೂ ಕಲಕಿ ಕಲ್ಲೋಲದ್ದಾಗಿ ಮಾಡುವದು. ಇದರಿಂದ ಒಂದು ಪ್ರಶ್ನೆಯ ಇತ್ಯರ್ಥಕ್ಕೆ ಒಂದು ವ್ಯಕ್ತಿಯ ಮೂಲ್ಯ ಮಾಪನಕ್ಕೆ ಅವಾಂತರವಾದ ಆಲೋಚನೆಗಳನ್ನು ತಂದೊಡ್ಡಿ ನಮ್ಮ ತೀರ್ಮಾನಗಳೇ ತೂಕತಪ್ಪುವಂತೆ ತಾಳಗೆಡುವಂತೆ ಆಗುವದು. ಆಧ್ಯಾತ್ಮಿಕತೆಯಿಂದ ರಾಜಕಾರಣ, ನೀತಿ ಮತ್ತೆಯಿಂದ ಕಲಾವಿದನ ವ್ಯಕ್ತಿತ್ವ, ದುರ್ವ್ಯಸನಗಳ ದೌರ್ಬಲ್ಯದಿಂದ ಒಬ್ಬ ವ್ಯಕ್ತಿಯ ಸಾತ್ವಿಕತೆ, ಮಾಂಸಾಹಾರ ದಿಂದ ಬ್ರಾಹ್ಮಣ್ಯ, ಗೋರಕ್ಷಣೆಯಿಂದ ಹಿಂದುತ್ವ, ಖಾದಿ ಯಿಂದ ದೇಶಭಕ್ತಿ, ಗಾಂಧಿವಾದದಿಂದ ಕಾಂಗ್ರೆಸ್ ನಿಷ್ಠೆ — ಹೀಗೆಲ್ಲ ನಾವು ಅಳೆಯುತ್ತೇವೆ. ಯಾರಿಂದ, ಯಾವ ಕ್ಷೇತ್ರದಲ್ಲಿ ಯಾವ ಮಟ್ಟಿಗೆ, ಎಂಥ ಅಪೇಕ್ಷೆ ಇಟ್ಟು ಕೊಳ್ಳಬೇಕೆಂಬುದರ ತಾರತಮ್ಯವೇ ನಮಗೆ ಇರುವದಿಲ್ಲ. ಪಂಡಿತ ನೆಹರೂ ದೇವರ ವಿಷಯಕ್ಕೆ ಅಶ್ರದ್ಧೆ ತೋರಿದರೆ ನಮಗೆ ಅದೇಕೋ ಅಸಹ್ಯವೆನಿಸುತ್ತದೆ! ವಿನೋಬಾಜಿ ಯವರ ಬೆನ್ನಿಗೆ ಮಹಿಳೆಯರೂ ಇದ್ದರೆ ನಮಗೇನೋ

ಸಂಕೋಚವೆನಿಸುತ್ತದೆ! ಹಿಂದೂ ಸಾಧುವಿನ ಶಿಷ್ಯರಲ್ಲಿ ಅಮೇರಿಕನ್ನರೊಬ್ಬಿಬ್ಬರು ಬಂದರೆ ನಮಗೆ ಹೇಗೋ ಅಭಿಮಾನವೆನಿಸುತ್ತದೆ! ಏಕೆ, ಏನು, ಹೇಗೆ ಕೇಳಬೇಡಿ! "ಇಂಥಿಂಥ ಸಾಧುಗಳನ್ನು ಇಂಗ್ಲಿಷ್ ಸದ್ಗೃಹಸ್ಥರೇ ಹೊಗಳುತ್ತಾರೆ! ಅಮೇರಿಕೆಯಲ್ಲಿ ಅವರಿಗೆ ತುಂಬ ಮನ್ನಣೆ ಇದೆ!" ಎಂದಾಗ ನಮಗೆ ಆ ಸಾಧುವಿನ ಕುರಿತು ಸಂದೇಹ ಪಡಬೇಕಾದದ್ದೇ ಇಲ್ಲವೆಂದೆನಿಸುತ್ತದೆ! ಸಾಮಾನ್ಯ ಅಮೇರಿಕನ್, ಸಾಮಾನ್ಯ ಇಂಗ್ಲಿಷ್ ಜನ, ಸಾಮಾನ್ಯ ಭಾರತೀಯನಷ್ಟೇ ಪ್ರಭಾವಪೂಜಕ, ಶ್ರದ್ಧಾಭಾವಿಕನಿರಬಾರದೇಕೆ? — ಎಂಬ ಪ್ರಶ್ನೆ ನಮಗೆ ತೋಚುವದೇ ಇಲ್ಲ. ಪಾಶ್ಚಾತ್ಯ ಮಹಿಳೆಯರಲ್ಲಿ ಭಾರತೀಯ ಸಾಧ್ವೀಮಣಿಗಳಲ್ಲಿಯಷ್ಟು ಪಾತಿವೃತ್ಯ ಇದೆಯೆಂದು ನಂಬುವದು ನಮಗೆ ಕಠಿಣವೆನಿಸುತ್ತದೆ! ಶಾಕಾಹಾರಿ ಯುರೋಪಿಯನ್ ನಮಗೆ ಹುಲ್ಲು ತಿನ್ನುವ ಹುಲಿಯಂತೆಯೇ ಒಂದು ಅಪೂರ್ವದ ಸೋಜಿಗವಾಗಿ ಕಾಣುತ್ತಾನೆ! ಇಂಥ ಪ್ರತಿಕ್ರಿಯೆಗಳಿಗೆ ನಮ್ಮಲ್ಲಿ ಯೋಗ್ಯ ಕಾರಣಗಳೇನೂ ಇರುವದಿಲ್ಲ. ಕೆಲವು ಸಂಗತಿಗಳ ಕುರಿತು ನಮ್ಮ ಮಾನಸಿಕ ಪ್ರತಿಕ್ರಿಯೆಗಳು ವಿಶಿಷ್ಟವಾಗಿ ಎರಕ ಹೊಯ್ದಂತೆ ಆಗಿವೆ. ಆ ಎರಕ ಒಡೆದು ಹರಿಯಲು ನಮ್ಮ ಬಗೆ ಬಯಸುವದಿಲ್ಲ. ಇದೂ ಒಂದು ಮನೋದೌರ್ಬಲ್ಯ.

೧೮ನೇ ಶತಮಾನದಲ್ಲಿ ಪ್ರಾನ್ಸದಲ್ಲಿಯ ಸುಸಂಸ್ಕೃತ ಮಂದಿಯೆಂಬುವವರು La Sensibilite ಎಂಬ ಭಾವನಾಮಯತೆ

ರುನ್ನು ಅತಿಯಾಗಿ ಆರಾಧಿಸುತ್ತಿದ್ದರು. ಈ ಶಬ್ದದ ಅರ್ಥ, ಾವೋದ್ರೇಕದ ಕುರಿತು — ಅದೂ ಹೆಚ್ಚಾಗಿ ಅನುಕಂಪೆ – ರುಣೆಗಳ ಕುರಿತು ವಿಪರೀತ-ಒಲವು. ಈ ಭಾವೋದ್ರೇಕ ಂದ ಪೂರ್ತಿ ಸಂತೃಪ್ತಿ ಪಡೆಯಬೇಕಾದರೆ, ಅದು ಪ್ರತ್ಯಕ್ಷ ರಬೇಕು, ಉತ್ಕಟವಿರಬೇಕು ಮತ್ತು ಅದಕ್ಕೆ ಜ್ಞಾನದ ಚಾರವಂತಿಕೆಯ ಯಾವ ತಿದ್ದುಪಡೆಯೂ ಇರಬಾರದು ! ದರ ಉದಾಹರಣೆಯೆಂದರೆ ಒಂದು ರೈತಕುಟುಂಬದ ೖನ್ಯ ದುರ್ದಶೆಗಳನ್ನು ಕಂಡು ಇಂಥ ಸುಸಂಸ್ಕೃತ ಣ್ಣೀರು ಸುರಿಸಬಹುದು ! ಆದರೆ ಬಡರೈತರ ದೈನ್ಯ ವಾರಣೆಯ ಯಾವದೇ ವಿಚಾರಪೂರ್ವಕವಾದ ಯೋಜ ಯ ಕಾರ್ಯದ ಕುರಿತು ಪೂರ್ತಿ ಉದಾಸೀನವಿರ ಹುದು ! ಇದರಿಂದ ಹೊರಟ ಒಂದು ಮೂಢ ಸಂಕೇತ ಂದರೆ, ಬಡವರು ಸಿರಿವಂತರಿಗಿಂತ ಹೆಚ್ಚು ಶೀಲ ಂತರೂ, ಸದ್ಗುಣಿಗಳೂ ಆಗಿರುತ್ತಾರೆಂಬುದು !

ಅಂದರೆ ಹಕ್ಕಿಯನ್ನು ಗುಂಡಿಕ್ಕಿ ಕೊಲ್ಲಲು ಹೇಸ ದ್ದರೂ, ಅದರ ಗರಿಗಳಿಗೆ ನೆತ್ತರ ತಾಗಿದರೆ ಹಳಹಳಿಸುವ ೋಮಲಾಂತಃಕರಣದ ಕ್ರೂರ ಕರ್ಮಿಗಳು ನಮ್ಮಲ್ಲಿ ಷ್ಟಿಲ್ಲ. “ ಪಶುಮಾರಣ ಕರ್ಮದಾರುಣಃ । ಅನುಕಂಪಾ ೃದುರೇವ ಶ್ರೋತ್ರಿಯಃ ” — ಎಂದು ಕಾಲಿದಾಸ ಣ್ಣಿಸಿದ ಮನೋವೃತ್ತಿ ಇಂದಿಗೂ ವಿಚಾರಗೇಡಿಯಾದ ಾವನಾಮಯತೆಗೂ ನಿದರ್ಶನವಾಗಿದೆ.

## ೧೦ “ ಅಪೇಕ್ಷಾಕೃತ ಅನುಮಾನ ”

ಈ ದೌರ್ಬಲ್ಯದ ಇನ್ನೊಂದು ಮುಖವೆಂದರೆ, ನಾವು ಒಂದು ಅನುಮಾನವನ್ನೊ ತರ್ಕವನ್ನೊ ಒಮ್ಮೆ ಮಾಡ ಹೊರಟರೂ ಅದನ್ನು ಸುಸಂಗತವಾಗಿ ಕೊನೆಯ ಫಲಿತಾಂಶದವರೆಗೂ ಒಯ್ಯುವದಿಲ್ಲ. ಒಂದು ತತ್ತ್ವವನ್ನು ಒಪ್ಪಿಕೊಂಡರೂ ಅದರಿಂದ ಹೊರಡುವ ತಪಶೀಲಿನ ನಿರ್ಣಯಗಳನ್ನು ಒಪ್ಪಲು ಹಿಂದೆಮುಂದೆ ನೋಡುವೆವು. ಒಂದು ಸುಧಾರಣೆಯನ್ನೋ ಬದಲಾವಣೆಯನ್ನೋ ತಾತ್ವಿಕವಾಗಿ, ಸಿದ್ಧಾಂತವೆಂದು ಮನ್ನಿಸಲು ನಾವು ಎಂದಿಗೂ ಸಿದ್ಧ. ಆದರೆ ಅದನ್ನು ಅನ್ವಯಿಸಿ ನಡೆಯಬೇಕಾದ ವಿಶಿಷ್ಟ ಪ್ರಸಂಗಗಳು ಎದುರಾದಾಗ ನಾವು ಹೆದರುವೆವು, ಹೇಸುವೆವು ಇಲ್ಲವೆ ಹಿಂದೆಗೆಯುವೆವು. ಅಸ್ಪೃಶ್ಯತಾ ನಿವಾರಣೆ ನಮಗೆ ಮಾನ್ಯ. ಆದರೆ ಮಾದಿಗರ ಅಥವಾ ಮುಕ್ರಿಯರ ಒಂದು ಮಗು ಮನೆಯೊಳಗೆ ನುಗ್ಗಿಬಿಟ್ಟರೆ ನಮಗೆ ಬ್ರಹ್ಮಾಂಡ ಕೋಪ ! ಎಷ್ಟೋ ಸಲ ನಮ್ಮ ತಿಳುವಳಿಕೆಯ ತರ್ಕಪದ್ಧತಿಯೇ ಕುಂದುತ್ತದೆ, ಕುಂದುಳ್ಳದ್ದಿರುತ್ತದೆ. ಆದರಿಂದ ನಾವು ಸುಸಂಗತ ವಿಚಾರಮಾಡಲು — ವಿಚಾರದ ತರ್ಕಶುದ್ಧ ನಿಷ್ಕರ್ಷಕ್ಕೆ ತಲ್ಪಲು — ಅಸಮರ್ಥರಾಗುತ್ತೇವೆ. ಆದರೆ ಅನೇಕಸಲ, ನಮ್ಮ ತರ್ಕಕ್ಕೆ ತೊಡಕಾಗುವದು ನಮ್ಮ ಮನೋದೌರ್ಬಲ್ಯವೇ. ಅನುಮಾನವನ್ನು ಅಡ್ಡಗಟ್ಟುವ ಅನಿಸಿಕೆ, ಅಂಜಿಕೆಗಳೇ ನಮ್ಮ ವಿಚಾರ ಚಕ್ರವನ್ನು ಕೀಲತಪ್ಪಿಸಿ, ಅಡ್ಡದಾರಿಗೆ ಒಯ್ಯುತ್ತವೆ.

ಇದು ಎರಡು ಬಗೆಯಾಗಿ ನಡೆಯುವ ನಷ್ಟ. ಒಂದು ಮೇಲೆ ಅಂದಂತೆ, ಒಂದು ಸಂಗತಿ ಸಾಮಾನ್ಯವಿದ್ದಾಗ, ತಾತ್ವಿಕ ಸ್ವರೂಪದಲ್ಲಿಯೇ ನಿಂತಾಗ, ಒಪ್ಪಿಕೊಂಡರೂ ಅದು ವಿಶೇಷಕ್ಕೆ, ವಿವರಕ್ಕೆ ನಮ್ಮ ಹತ್ತಿರದ ಹಿತಗಳ ಹದ್ದಿಗೆ ಇಳಿದಾಗ ಅದು ನಮಗೆ ಒಗ್ಗುವದಿಲ್ಲ. ಇನ್ನೊಂದು ಇದಕ್ಕೂ ಸೂಕ್ಷ್ಮವಾಗಿ ವಿಪರೀತವಾಗಿ ನಡೆಯುವ ಬಗೆ. ಇಂಗ್ಲಿಷ್ ಮಾತಿನಲ್ಲಿ ಇದನ್ನು " Wishful thinking " – ಎಂದು ಹೇಳುವ ರೂಢಿ. ಅನೇಕಸಲ ನಮ್ಮ ಬಯಕೆ ಗಳೇ ವಿಚಾರಗಳ ಸ್ಥಾನವನ್ನು ಆಕ್ರಮಿಸುತ್ತವೆ. ಪ್ರೇಯವೇ ಶ್ರೇಯವೆಂದು ತೋರುತ್ತದೆ. ಆಶೆಯೇ ಆಪದ್ಧರ್ಮವಾಗಿ ಕಾಣುತ್ತದೆ. ಅಂಥಲ್ಲಿ ನಮ್ಮ ನೀತಿಗೆ ನಿರ್ಣಯಕ್ಕೆ ಯಾವ ಸಯುಕ್ತಿಕ ನೆಲೆಯೂ ಇರುವದಿಲ್ಲ. ಇದು " ಅಪೇಕ್ಷಾಕೃತ ಅನುಮಾನ " ವೆನ್ನಬಹುದು. ಇದೂ ಒಂದು ಬಗೆಯ ದಾರಿತಪ್ಪಿದ ಆತ್ಮೋಪಮ್ಯದ ದೃಷ್ಟಿ. ತನ್ನಂತೆ ಪರರ ಬಗೆಯುವ ಹದಗೆಟ್ಟ ಹಾದಿ. ಅನೇಕ ಹಟವಾದಿ ಸುಧಾರಕರೂ, ಸಾಧುಪುರುಷರೂ ಲೋಕದ ಡೊಂಕನ್ನೇ ತಿದ್ದುವ ಹವ್ಯಾಸತೊಟ್ಟು ಪರಪೀಡಕರಾಗಿ ಹೋದದ್ದು ಈ ಮೂಲಕವೇ ಸರಿ! ತಮಗೆ ಮೆಚ್ಚಿಗೆ ಯಾದದ್ದು — ಅದಕ್ಕೂ ಹೆಚ್ಚಾಗಿ ತಮಗೆ ಮೆಚ್ಚಿಗೆ ಆಗ ದ್ದದ್ದು — ಲೋಕಕ್ಕೂ ಹಾಗೆಯೇ ಸರಿಯೆಂದು ಭಾವಿ ಸುವದೂ, ಆ ಭಾವನೆಯ ಆವೇಶದಲ್ಲಿ ಲೋಕವನ್ನು ತಿದ್ದಲು ಹೊರಡುವದೂ ಇದೇ ಅಪೇಕ್ಷಾಕೃತ ಅನುಮಾನದ ವಿಕೃತ ಫಲ.

ಇದರ ಒಂದು ವ್ಯಾಪಕ ವಿಚಾರವೆಂದರೆ, ಮನಸ್ಸಿನ ಮೂರು ಮುಖಗಳಲ್ಲಿ ಕೆಲವೊಂದು ವೃತ್ತಿಯ ಜನ ಒಂದೊಂದೇ ವಿಶಿಷ್ಟ ಮುಖವನ್ನು ಮಿಕ್ಕುದಕ್ಕಿಂತ ಹೆಚ್ಚಾಗಿ ಬೆಳೆಯಿಸಿ ಪಳಗಿಸಿಕೊಂಡಿರುತ್ತಾರೆ. ಹಟಯೋಗಿಗಳು, ರಾಜಕಾರಣಿಗಳು, ಸೇನಾಪತಿಗಳು, ಅನುಶಾಸಕರು, ಕರ್ಮಠರು, ಆಚಾರವಂತರು, ಸಂಯಮ, ನಿಗ್ರಹ, ಆಗ್ರಹ, ಶಿಸ್ತು, ನಿಯಮ-ನಿಷ್ಠೆ, ಕಡ್ಡಾಯ ಕಟ್ಟುಗಳನ್ನೆ ನಡೆಯಿಸಲು ಪಳಗಿದವರು ಇಚ್ಛಾಶಕ್ತಿಯನ್ನೆ ಬೆಳೆಯಿಸಿಕೊಂಡಿರುತ್ತಾರೆ. ವಿಜ್ಞಾನಿಗಳು, ಕಾಯಿದೆ ಪಂಡಿತರು, ವಾದಪಟುಗಳು, ನ್ಯಾಯಾಧೀಶರು, ತಾಂತ್ರಿಕರು, ವಿಶೇಷಜ್ಞರು ತರ್ಕ, ವಿಚಾರ, ಅನುಸಂಧಾನ, ಮನನ, ಚಿಂತನೆಗಳನ್ನೆ ಪಳಗಿಸಿಕೊಂಡವರು ಮನಸ್ಸಿನ ಇನ್ನೊಂದು ಮುಖವಾದ ಬುದ್ಧಿಶಕ್ತಿಯನ್ನೇ ಬೆಳೆಯಿಸಿಕೊಂಡಿರುತ್ತಾರೆ. ಕಲಾವಿದರು, ಕವಿಗಳು, ರಸಿಕರು, ಅನುಭಾವಿಗಳು, ಭೂತದಯಾವಾದಿಗಳು ಮನಸ್ಸಿನ ಮೂರನೆಯ ಮುಖವಾದ ಭಾವನೆಯನ್ನೆ ಪಳಗಿಸಿ ಬೆಳೆಯಿಸಿಕೊಂಡಿರುತ್ತಾರೆ. ಒಳ್ಳೆಯ ಬಾಳು ಬದುಕುವವನು ಹೀಗೆ ಕೇವಲ ಒಂದರದೇ ಸೆರಗು ಹಿಡಿಯಬಾರದು, ಒಂದನ್ನೇ ಶರಣು ಹೋಗಬಾರದು. ಆತ ಬುದ್ಧಿ, ಭಾವನೆ, ಇಚ್ಛೆಗಳ ತ್ರಿಕೋನದ ಮಧ್ಯಬಿಂದುವನ್ನು ಸಾಧಿಸಬೇಕು. ತ್ರಿವೇಣಿ ಸಂಗಮದಲ್ಲಿ ಸ್ನಾನ ಮಾಡಬೇಕು. ಇಚ್ಛಾಪ್ರಧಾನವಾಗುವದಕ್ಕೆ ಬದುಕಿನ ಒತ್ತಾಯವೇ ಸಾಕು. ಇಚ್ಛೆಗೂ ಅದರ ತೃಪ್ತಿಗೂ ಅಂತರ ಬಂದಂತೆ ಅದನ್ನು ತುಂಬುವ ತವಕ ಭಾವನೆಯದು.

ಒಂದನ್ನು ಹಿಡಿತದಲ್ಲಿಟ್ಟು ಇನ್ನೊಂದನ್ನು ಹಿತವಾಗಿ ಪೂರೈಸಿ ಕೊಳ್ಳುವದೇ ಬುದ್ಧಿ. ಈ ಕ್ರಮದಲ್ಲಿ ಅವುಗಳ ಸಮನ್ವಯವಾದರೇನೆ ಬಾಳಿನ ಸಾಮರಸ್ಯ - ಸ್ವಾರಸ್ಯ. ಇಲ್ಲವಾದರೆ ಒಂದು ಮುಖವನ್ನೆ ಪೋಷಿಸಿಕೊಳ್ಳುವವ ಇನ್ನೆರಡು ಅಂಶಗಳಲ್ಲಿ ಊನನೇ, ಹೀನನೇ. ಆ ಅಂಗಗಳ ದೌರ್ಬಲ್ಯ ಕೊನೆಗೆ ಈ ಪುಷ್ಟ ಬಲಿಷ್ಠ ಅಂಗದ ವ್ಯಾಪಾರಕ್ಕೂ ಮಾರಕವಾಗುತ್ತದೆ.

ಶುದ್ಧ ವಿಚಾರಸರಣಿಗೆ ಬಾಧಕವಾಗುವ ಸಂಗತಿಗಳನ್ನು ಇಷ್ಟು ಹೊತ್ತು ಚರ್ಚಿಸಿದ್ದಾಯಿತು. ಈ ಚರ್ಚೆ ಇಷ್ಟಕ್ಕೆ ನಿಲ್ಲಿಸುವದು ಅದಕ್ಕೆ ಮಿತಿ ಹಾಕಲೇ ಹೊರತು ಇತಿಯೆಂದಲ್ಲ.

## ೨೦. ವಿಚಾರವಾದದ ಪ್ರತಿಜ್ಞೆ

ಇದುವರೆಗೆ ನಾವು ತಿಳಿದುಕೊಂಡದ್ದೇನು ? ವಿಚಾರವಾದದ ಆವಶ್ಯಕತೆ, ಶುದ್ಧ ವಿಚಾರ ಪದ್ಧತಿಯ ದಾರಿಯಲ್ಲಿ ತೊಡಕಾಗುವ ವಿಕಾರವಶತೆ, ಈ ವಿಕಾರವಶತೆಯ ವಿವಿಧ ರೂಪಗಳು, ಅವುಗಳ ಕುರಿತು ನಾವು ವಹಿಸಬೇಕಾದ ಜಾಗ್ರತೆ. ನಿಜವಾಗಿಯೂ ಮಾನವತೆಯ ಲಕ್ಷಣವೇ ಲಾಂಛನವೇ ವಿಚಾರ, ತರ್ಕ ಮತ್ತು ವಿಚಿಕಿತ್ಸೆ. ಆದರೆ ಅದಕ್ಕಾಗಿಯೇ ಪ್ರತ್ಯೇಕವಾಗಿ ಪ್ರತಿಪಾದಿಸುವ ಪ್ರಸಂಗ ಇಂದು ಒದಗಿದೆ — ಅದೂ ವಿಶೇಷತಃ ಇಂದಿನ ವೈಜ್ಞಾನಿಕ

ಯುಗದಲ್ಲಿ ! ಇಂದಿನ ಯುಗದ ಒಂದು ವಿಪರೀತವಿದು. ವಿಜ್ಞಾನವೂ, ಅದರ ದಿನ ನಿತ್ಯದ ದಿಗ್ವಿಜಯಗಳೂ ತಾನೇ ತಾನಾಗಿ ವಿಜೃಂಭಿಸುತ್ತಿರುವ ಇಂದಿನ ಪ್ರಪಂಚದಲ್ಲಿ ವೈಜ್ಞಾನಿಕತೆಗೇ ಗ್ರಹಣಹಿಡಿದಂತಿದೆ. ಪ್ರತಿವರ್ಷ ಸಾವಿರ ಗಟ್ಲೆ ತರುಣರು ವಿಜ್ಞಾನದ ವಿವಿಧ ಶಾಖೆಗಳಲ್ಲಿ ವಿಶೇಷಜ್ಞ ರಾಗಿ ವಿಶ್ವವಿದ್ಯಾಲಯಗಳಿಂದ ಹೊರಬೀಳುತ್ತಾರೆ. ಆದರೆ ಆ ಪ್ರಮಾಣದಲ್ಲಿ ಎಷ್ಟು ಜನ ವೈಜ್ಞಾನಿಕ ದೃಷ್ಟಿಯನ್ನು ವೈಚಾರಿಕ ಪ್ರವೃತ್ತಿಯನ್ನು ಬೆಳೆಯಿಸಿಕೊಂಡವರಿದ್ದಾರೆ ? ಹೊಸ ವಿಜ್ಞಾನವೆಲ್ಲ ತಮ್ಮ ಹಳೆಯ ಅಜ್ಞಾನಕ್ಕೆ ಒಪ್ಪೆ ಕೊಡಲಿಕ್ಕೆ, ಒಪ್ಪಿಗೆ ಒದಗಿಸಲಿಕ್ಕೆ ಬಳಸುವ ಬಲವಂತಿ ಕೆಯೋ ಎಲ್ಲೆಡೆಗೆ ಕಂಡುಬರುತ್ತದೆ. ಇದರ ಕಾರಣಗಳನ್ನು ಹಿಂದೆಯೇ ಹೇಳಲಾಗಿದೆ.

ಆದ್ದರಿಂದ ನಮಗಿಂದು ಮುಖ್ಯವಾಗಿ, ಮೊತ್ತ ಮೊದಲಾಗಿ ಬೇಕಾಗಿರುವ ಕ್ರಾಂತಿ ವಿಚಾರಕ್ರಾಂತಿ. ಜಗತ್ತಿನ ಇತಿಹಾಸವೇ ಇದಕ್ಕೆ ಸಾಕ್ಷಿ. ಹಟವಾದ, ಮತ ವಾದ, ಮತವಾದಗಳೇ ಇದಕ್ಕೆ ಪ್ರತಿಕಕ್ಷಿ. ಯಾವ ಕ್ರಾಂತಿಯೂ ಕೇವಲ ಹೆಗಲಿಗೇರಿಸಿದ ತುಬಾಕಿಯಿಂದ ಮೊದಲಾಗುವದಿಲ್ಲ, ಮುಗಿಯುವದೂ ಇಲ್ಲ. ತುಬಾಕಿ ಗಿಂತ ಅದನ್ನೆತ್ತಿ ಹಾರಿಸುವ ಕೈ, ಆ ಕೈ ಎತ್ತುವಂತೆ ಮಾಡ ಬಲ್ಲ ಕೆಚ್ಚು, ಆ ಕೆಚ್ಚು ಕುದುರಿಸಬಲ್ಲ ಸ್ಫೂರ್ತಿ, ಆ ಸ್ಫೂರ್ತಿಗೆ ನೆಲೆಯಾಗುವ ಧ್ಯೇಯವಾದ, ತಾತ್ತ್ವಿಕ ತಳ ಹದಿ, ವಿಚಾರಪ್ರಣಾಲಿ ( Ideology ) ಇವುಗಳೇ

ಕೊನೆಗೂ ಮೊದಲೂ ನಿರ್ಣಾಯಕ ಸಂಗತಿಗಳು. ಯಾವ ಕ್ರಾಂತಿಗೂ ಪೂರ್ವದಲ್ಲಿ ವಿಚಾರಕ್ರಾಂತಿ ಅವಶ್ಯ. ಅದಕ್ಕೆ ಮೊದಲು ಬೌದ್ಧಿಕ ಅಸಂತೋಷ, ವಿಚಿಕಿತ್ಸೆ ಆಗತ್ಯ. ಶ್ರದ್ಧೆಗಿಂತ ಸಂದೇಹವೇ ಮನುಷ್ಯನ ಮನಸ್ಸಿನ ಮೂಲ ನಿರ್ಮ. ಸಂದೇಹ ನಿವಾರಣೆಯಾದ ಹೊರತು ಕ್ಷೇಮವಿಲ್ಲ, ಕ್ಷೇಮವಿಲ್ಲ. ಮತ್ತು ಸಂದೇಹವನ್ನು ಹತ್ತಿಕ್ಕುವದು ಕೊನೆಗೂ ಸಾಧ್ಯವಿಲ್ಲ.

ಆದ್ದರಿಂದ ವಿಚಾರವಾದದ ವೀಳ್ಯವೆತ್ತಿದವರು ಬಳಗಿಸಬೇಕಾದದ್ದು ಈ ಸಂದೇಹ ಪ್ರವೃತ್ತಿ; ಈ ವಿಚಿಕಿತ್ಸೆಯ ವೃತ್ತಿ " ಏಕೆ ? " ಮತ್ತು " ಹೇಗೆ ? " ಇವೆರಡರ ಐಕ್ಯೆಯಲ್ಲಿ ಸತ್ಯವನ್ನು ಸೆರೆಹಿಡಿಯದೇ ಸುಖವು ಸಂಪನ್ನವಾಗದು. ಏಕೆಂದರೆ ಸುಖಕ್ಕೆ ಮೂಲ ಮನಃಶಾಂತಿ. ಮನಃಶಾಂತಿಯ ಒಂದೇ ಶಾಶ್ವತ ಸಾಧನೆ ಭಯ – ಸಂಶಯಗಳ ನಿವಾರಣೆ. ಅದರ ಒಂದೇ ಸಾಧನ ವಿಚಾರವಾದ.

ಹಾಗಾದರೆ ಈ ವಿಚಾರವಾದದ ತತ್ತ್ವವೇನು ? ತಂತ್ರವೇನು ? ಪಳಗಿಸಿಕೊಳ್ಳಬೇಕಾದ ಅದರ ಪಂಥ ಪದ್ಧತಿಗಳೇನು ? ಇವನ್ನು ಕುರಿತು ಆದಷ್ಟು ಸ್ವಲ್ಪದರಲ್ಲಿ ಇಲ್ಲಿ ಹೇಳಬೇಕಾಗಿದೆ.

ಮನುಷ್ಯನ ಆತ್ಮಸ್ವಾತಂತ್ರ್ಯಕ್ಕೆ ಆಧಾರವಾದ ಸತ್ಯಗಳು ಮೂರು. ಅದೇ ವಿಚಾರವಾದದ ತ್ರಿಪೀಠಿಕೆ.

ಕ್ಲಾಯಿವ್ಹ್ ಬೆಲ್ ತನ್ನ "ಸಿವಿಲಿಝೇಶನ್" ಎಂಬ ಸುಪ್ರಸಿದ್ಧ ಪುಸ್ತಕದಲ್ಲಿ ಅವನ್ನು ಈ ರೀತಿ ಸಾರಿದ್ದಾನೆ.

೧. ನಾವು ನಂಬಿದ್ದೆಲ್ಲ ನಿಜವಿರಬೇಕೆಂದಿಲ್ಲ.

೨. ನಾವು ಮೆಚ್ಚಿದ್ದೆಲ್ಲ ಒಳಿತಿರಬೇಕೆಂದಿಲ್ಲ.

೩. ಎಲ್ಲ ಪ್ರಶ್ನೆಗಳಿಗೂ ಕೊನೆಯ ಉತ್ತರಸಿಕ್ಕಿದೆಯೆಂದಿಲ್ಲ.

ಅಂದರೆ ಎಲ್ಲ ಪ್ರಶ್ನೆಗಳೂ ಎಂದಿಗೂ ಮುಂದಿನ ಹೆಚ್ಚಿನ ವಿಚಿಕಿತ್ಸೆ – ಚರ್ಚೆಗಳಿಗೆ ತೆರೆದವೇ ಇರುತ್ತವೆ. ಈ ಮೂರು ಸೂತ್ರಗಳು ನೋಡಲು ಬಲು ಸಲಿಸವಾಗಿ ಕಾಣುವವು. ಆದರೆ ಬದುಕಿನ ಸೋಜಿಗವೇ ಇದು. ಹಿರಿದಾದುದೆಲ್ಲ ಸಲಿಸವಾಗಿಯೇ ಸರಳವಾಗಿಯೇ ಕಾಣುತ್ತದೆ ! ನಾಗರಿಕತೆಯ ಮೂಲವೇ ಕುತೂಹಲ. ಕುತೂಹಲಕ್ಕೆ ಅಡಿಗಲ್ಲೇ ಈ ಮೂರು ತತ್ತ್ವಗಳು. ಇದರ ಇನ್ನೊಂದು ಮೈಯೇ ಸಂಸ್ಕೃತಿ. ಅದರ ತಿರುಳು ಸಹಿಷ್ಣುತೆ. ಸ್ವಾತಂತ್ರ್ಯಕ್ಕೆ ಸಹಿಷ್ಣುತೆಯೇ ರಕ್ಷಾಕವಚ. ಅಂದರೆ ಒಟ್ಟಾರೆ ವಿಚಾರವಾದವು, ಬುದ್ಧಿಪ್ರಾಮಾಣ್ಯವು ಸ್ವಾತಂತ್ರ್ಯಕ್ಕೂ, ಸಂಸ್ಕೃತಿಗೂ, ನಾಗರಿಕತೆಗೂ, ಮಾನವನ ಸುಖಶಾಂತಿಗೂ ಕೂಡಿಯೇ ಬೀಜಮಂತ್ರವೆಂದಾಯಿತು.

ಒಂದು ಚೀನೀ ಗಾದೆ ಹೇಳುತ್ತದೆ — ಪ್ರತಿಯೊಂದು ಪ್ರಶ್ನೆಗೂ ಮೂರು ಬದಿಗಳಿರುತ್ತವೆ. ಒಂದು ನನ್ನ ಬದಿ;

ಇನ್ನೊಂದು ನಿನ್ನ ಬದಿ; ಮತ್ತೊಂದು — ನಿಜವಾದ ಬದಿ. ಈ "ಮೂರನೇ ಪರಿಮಾಣ" ನೋಡುವ ಕಣ್ಣೆ ನಮ್ಮ ತಿಳಿಗಣ್ಣು -- ನರನನ್ನು ಹರನನ್ನಾಗಿ ಮಾಡುವ ಹಣೆಗಣ್ಣು. ಅದೇ ಗೀತೆ ಬಣ್ಣಿಸಿದ "ಆರನೆಯ ಇಂದ್ರಿಯ." ನಮ್ಮ ಗಾಂಧೀಜೀ ಚೀನೀ ಗಾದೆಗೂ ಮುಂದೆ ಹೋಗಿ ಪ್ರತಿಯೊಂದು ಪ್ರಶ್ನೆಗೂ ಕನಿಷ್ಠ ಆರು ಮಗ್ಗಲುಗಳಿರುತ್ತವೆಂದು ಒಮ್ಮೆ ಹೇಳಿದ್ದರು. ಅಂತೂ ನಾವು ಕಂಡಷ್ಟೂ ಸತ್ಯವನ್ನು ನಂಬುವಾಗ ನಾವು ಕಂಡದ್ದೇ ಸತ್ಯವೆಂಬ ಹಟ, ಅನ್ಯರು ಕಂಡದ್ದರ ಕುರಿತು ಹೇವ ನಮಗೆ ಬೇಡ. ಈ ಪ್ರತಿಜ್ಞೆ ವಿಚಾರವಾದದ ಪ್ರಥಮ ದೀಕ್ಷೆ. ಈ ದೀಕ್ಷೆಯ ಮಂತ್ರವೇ ಮೇಲಿನ ಮೂರು ಸೂತ್ರಗಳು.

ವಿಚಾರವಾದಿಯ ಮುಖ್ಯ ವ್ರತ ವಿಚಿಕಿತ್ಸೆಯದು. ಆ ವಿಚಿಕಿತ್ಸೆ, ತನ್ನಿಂದಲೇ – ತನ್ನ ವಿಚಾರ ಭೂಮಿಕೆಯಿಂದಲೇ — ಆರಂಭವಾಗಬೇಕು. ತನ್ನ ವಿಚಾರ ಸರಿಯೇ ? ಸಮಗ್ರವೇ ? ಅದರ ಹಿಂದಿನ ಪ್ರೇರಣೆ ಯಾವದು ? ಸತ್ಯಾನ್ವೇಷಣೆಯೇ ಅಥವಾ ಮೂಢಭಾವನೆಯೇ ? ಅಥವಾ ಪೂರ್ವಗ್ರಹಿಕೆಗಳೇ ? ಈ ಕುರಿತು ವಿಚಾರವಾದಿಯು ಕೆಲವೊಂದು ಪಥ್ಯವನ್ನು ಪಾಲಿಸಬೇಕು.

## ೨೧. ಪಾಲಿಸಬೇಕಾದ ಪಥ್ಯಗಳು

ಮೊದಲನೆಯ ಪಥ್ಯವೆಂದರೆ, ಒಂದು ಪ್ರಶ್ನೆ ಒಂದು

ಪ್ರಮೇಯ ಮುಂದೆ ಇದ್ದಾಗ ಈ ವಿಷಯದ ವ್ಯವಸಾಯ ಮಾಡಿದ ಅದರ ವಿಚಾರಕ್ಷೇತ್ರದ ಅಧಿಕಾರಿಯಾದ ತಜ್ಞನ ಮತವನ್ನೇ ಪ್ರಮಾಣವೆಂದು ಹಿಡಿಯತಕ್ಕದ್ದು. ಒಂದು ರೋಗದ ಕುರಿತು ವೈದ್ಯಕೀಯ ತಜ್ಞನೇ ಅಧಿಕಾರಿಯೇ ಹೊರತು ಗುಡಿಗುಂಡಾರಗಳ ಪೂಜಾರಿ - ಗುನಗರಲ್ಲ. ಜೀವನ ಒಂದು ಸಂಮಿಶ್ರ ಸಮಸ್ಯೆ - " ಸಂಕೀರ್ಣ ಉದಾಹರಣ ಸಂಗ್ರಹ ". ಅಡಿಗಡಿಗೂ ನಮಗೆ ಇಲ್ಲಿ ತಲೆದೋರುವ ಪ್ರಶ್ನೆಗಳ ಪರಿ-ಪದರುಗಳನ್ನು ವಿಂಗಡಿಸುವದೇ ತಲೆಭಾರವಾಗುತ್ತದೆ. ಅಂದಾಗ ಆಯಾ ಅಂಗದ ತಜ್ಞ ಅಧಿಕಾರಿಯನ್ನು ಕೇಳುವದಂತೂ ದೂರವೇ. ಆದರೂ ಸಾಮಾನ್ಯವಾಗಿ ನಾವು ಈ ಕುರಿತು ದೊಡ್ಡ ತಪ್ಪು ಮಾಡುತ್ತೇವೆ. ಆಪ್ತನನ್ನೆ ಅಧಿಕಾರಿಯೆಂದೂ, ನಮ್ಮ ಅಭಿಲಾಷೆಗೆ ಅನುಕೂಲವಾದದ್ದೇ ಉಚಿತ ಅಭಿಪ್ರಾಯವೆಂದೂ ಒಪ್ಪಿಕೊಂಡು ಬಿಡುತ್ತೇವೆ. ಒಂದು ವಿಷಯದ ತಜ್ಞ ಇತರ ವಿಷಯಗಳಲ್ಲಿಯೂ ಜ್ಞಾನಿಯೆಂದು ನಾವು ಮನ್ನಿಸುತ್ತೇವೆ. ಅಂಥಲ್ಲಿ ಮುಕ್ಕಾಲು ಪಾಲು ನಮ್ಮ ಅಜ್ಞಾನವೇ ಅವನ ಜ್ಞಾನವಾಗಿ ನಮ್ಮ ಕುರುಡು ನಂಬಿಗೆಗೆ ಕಂಗೊಳಿಸುತ್ತದೆ.

ಇನ್ನು ಎರಡನೆಯ ಪಥ್ಯವೆಂದರೆ ಒಂದು ಅಭಿಪ್ರಾಯದಿಂದ ಅದರೊಳಗಿನ ಅಭಿನಿವೇಶವನ್ನು ಅರ್ಥವಾದವನ್ನು ವಿಂಗಡಿಸಿ ನೋಡುವುದು. ಸತ್ಯಕ್ಕೆ ಆವೇಶ ಉನ್ಮಾದಗಳು ಬೇಡ. " ಶೇಷಂ ಕೋಪೇನ ಪೂರಯೇತ್ " ಎಂಬ ವ್ಯವಹಾರದ ಸೂತ್ರ ವ್ಯವಹಾರದಲ್ಲಿಯೂ ವಿಪರೀತಕ್ಕೆ

ಮುಳುವಾಗುತ್ತದೆ. ಒಂದು ಮತಪ್ರತಿಪಾದನೆಯಲ್ಲಿ ಒಬ್ಬರು ಪ್ರಕಟಮಾಡುವ ಆವೇಶ ಅಭಿನಿವೇಶಗಳು ಆ ಮತದಲ್ಲಿಯ ವಿಚಾರಗೇಡಿತನದ ಪ್ರಮಾಣವನ್ನೆ ತೋರಿಸುವವೆಂದು ನಿರ್ಧಾರವಾಗಿ ತಿಳಿಯಬೇಕು. ಅಂಥ ವಿಶೇಷ ಪ್ರತಿಪಾದನೆಯ ವಿರುದ್ಧ ನಾವು ಅಂಕಿತರಾಗಿಯೇ ಜಾಗೃತರಾಗಿಯೇ ಇರಬೇಕು. " ಇಂಥಿಂಥವರೇ ಹೇಳಿದ್ದಾರೆ " " ಇದನ್ನು ಒಪ್ಪದಿರುವದು ಮೂರ್ಖತನ " " ರಾಷ್ಟ್ರಾಭಿಮಾನಿಗಳು ಯಾರೂ ಇದನ್ನು ಅಲ್ಲಗಳೆಯಲಾರರು ! " " ಈ ಬಗ್ಗೆ ಸಂಶಯ ಪಡುವದು ರಾಷ್ಟ್ರಪಿತರಿಗೆ - ದೇಶಕ್ಕೆ - ದೇವರಿಗೆ - ಇನ್ನಾರಿಗೋ ದ್ರೋಹ ಬಗೆದಂತೆ ! " " ಇದು ಪುಣ್ಯ. ನಮ್ಮ ದೊಡ್ಡಸ್ತಿಕೆಯ ಲಕ್ಷಣ ! " – ಇವೇ ಮಾದರಿಯ ಮಾತುಗಳು ಇಂಥ ವಿಕೃತ ವಿಚಾರಸರಣಿಯ ಕುರುಹುಗಳಾಗಿವೆ.

ಮೂರನೆಯ ಪಥ್ಯ ಉಪಮಾನವನ್ನು ಅನುಮಾನವೆಂದು ನಂಬಬಾರದು. ಅನೇಕ ಸಲ ಮತಪ್ರಚಾರಕರು ಮನಗಾಣಿಸುವದಕ್ಕಿಂತ ಮನ ಒಲಿಸುವ ಹೊಂಚು ಹಾಕಿ ಈ ಸೊಗಸಾದ ಉಪಮೆ-ದೃಷ್ಟಾಂತಗಳನ್ನೊ ಉದಾಹರಿಸಿ ತಮ್ಮ ತತ್ವದೊಳಗಿನ ತರ್ಕದ ಹಾಗು ತಥ್ಯದ ಕೊರತೆಯನ್ನು ತುಂಬಿಕೊಳ್ಳುತ್ತಾರೆ. ನಿಯಮ – ಉಪನಿಯಮಗಳನ್ನು ಚರ್ಚಿಸುವಾಗ, ಒಂದು ಪ್ರತಿಪಾದನೆಯೊಳಗಿನ ಯುಕ್ತಿವಾದವನ್ನು ವಿವರಿಸುವಾಗ ಆಗಂತುಕ ಅಪ್ರಸ್ತುತ ಆಲಂಕಾರಿಕ ಮಾತುಗಳನ್ನೆಲ್ಲ ಉಪಯೋಗಿಸಿ ಒಂದು ಮಾಯಾಜಾಲವನ್ನೇ ಹಬ್ಬಿಸುವದು ವಾಡಿಕೆ–ಮುಂದಿಯನ್ನು

ಮುಂಕುಗೊಳಿಸಲಿಕ್ಕೆ. ಅಂಥಲ್ಲಿ ಕಾಳು ಯಾವದು, ಜೊಳ್ಳು ಯಾವದು, ಸರಕು ಯಾವದು, ಅದನ್ನು ಸುತ್ತಿದ ಬಣ್ಣದ ಕಾಗದ ಯಾವದು - ಇದನ್ನು ಅರಿತುಕೊಳ್ಳುವ ಎಚ್ಚರ ನಾವು ಸಾಧಿಸಬೇಕು.

ಕೊನೆಯದಾಗಿ ಪಾಲಿಸುವ ಪಥ್ಯವೆಂದರೆ ತಜ್ಞರಲ್ಲಿಯೇ ಮತಭೇದ ಬಂದಾಗ ನಮ್ಮ ನಿರ್ಣಯವನ್ನು ತಡೆಹಿಡಿಯು ವದು. ಒಂದು ವೇಳೆ ಪರಿಸ್ಥಿತಿಯ ಒತ್ತಾಯಕ್ಕೆ ಕೆಲ ವೊಂದು ನಿರ್ಣಯವನ್ನು ಅನುಸರಿಸಲೇಬೇಕಾಗಿ ಬಂದಲ್ಲಿ ಅದನ್ನೇ ಕೊನೆಯ ತೀರ್ಮಾನವೆಂದು ತಿಳಿಯದೆ ಅನುಭವದ ಅವಲೋಕನೆಯ ಹಾಗೂ ಹೆಚ್ಚಿನ ಅನುಮಾನದ ಬೆಳಕಿನಲ್ಲಿ ಅದನ್ನು ಆದಷ್ಟು ಬೇಗ ತಿದ್ದಿಕೊಳ್ಳುವ ತತ್ಪರತೆಯನ್ನು ತೋರಿಸಬೇಕು. ನಮ್ಮ ಅಲ್ಪಜ್ಞತೆಯ, ಅರ್ಧಜ್ಞಾನದ, ಅವಸರದ, ಆತುರದ, ಕೆಲವೊಮ್ಮೆ ಅಜ್ಞಾನದ ಮತಾಭಿಪ್ರಾಯಗಳ ಕುರಿತು ಸಲ್ಲದ ಆಗ್ರಹವಿರಕೂಡದು.

## ೨೨. ಹೊಸ ಷಡ್ದರ್ಶನ

ಇಂಥ ಪಥ್ಯಗಳಿಂದ ತಿಳಿಯಾಗುವ ನಮ್ಮ ದೃಷ್ಟಿ ಆರು ಬಗೆಯಾಗಿ ಹುರಿಗೊಳ್ಳಬೇಕು. ವಿಚಾರವಾದದ ಈ ಹೊಸ ಷಡ್ದರ್ಶನವನ್ನು ಹೀಗೆ ಬಣ್ಣಿಸಬಹುದು.

ಮೊದಲನೆಯದು **ವೈಜ್ಞಾನಿಕ ದೃಷ್ಟಿ**. ಇದರ ದಾರಿ ಪ್ರಯೋಗದ್ದು, ಪರಿಶೀಲನೆಯದು, ಪರೀಕ್ಷಣೆಯದು,

ಪರಿಪ್ರಶ್ನೆ" ಯದು. ಕಾರ್ಯ-ಕಾರಣ ಸಂಬಂಧ
ನ್ನು ಖಚಿತವಾಗಿ ಕಂಡುಹಿಡಿಯುವ ಪರಿಶ್ರಮ ಇದರದು.
ಕಷ್ಟು ಸರಿಯಾದ ಪುರಾವೆ ಇಲ್ಲದೆ ಒಂದು ಸಂಗತಿ
ನ್ನು ನಂಬದಿರುವದು ಇದರ ಪಂಥ. ಊಹೆ, ಮತ,
ದ್ಧಾಂತ ಮತ್ತು ಸತ್ಯ ಇವುಗಳ ಸೋಪಾನದ ಎತ್ತರ-
ತ್ತರಗಳನ್ನು ಈ ದೃಷ್ಟಿ ಅರಿಯಬಲ್ಲದು, ಅಳೆಯಬಲ್ಲದು.
ದರೆ ದುರ್ದೈವವೆಂದರೆ ಅನೇಕ ವಿಜ್ಞಾನಿಗಳು ತಮ್ಮ
ಯೋಗಶಾಲೆ, ಪಾಠಶಾಲೆಗಳಿಂದ ಹೊರಗೆ ಬಂದಾಗ
ದುಕಿನ ಪ್ರಮೇಯಗಳನ್ನು ಎದುರಿಸುವಾಗ ಈ ದೃಷ್ಟಿ
ಂದ ನೋಡುವ ರೂಢಿಯನ್ನೇ ಮಾಡಿಕೊಂಡಿ
ವದಿಲ್ಲ !

ಎರಡನೆಯದು **ಐತಿಹಾಸಿಕ ದೃಷ್ಟಿ.** ಒಂದು
ತಿ ಇದೂ ವೈಜ್ಞಾನಿಕವೇ. ಆದರೆ ವೈಜ್ಞಾನಿಕವೆಂದಾಗ
ವಲ ಯಥಾರ್ಥಿಕ ಅಥವಾ ಪಾರಮಾರ್ಥಿಕ (abstract)
ಮಿಕೆ ಇಲ್ಲಿ ಇರುವದಿಲ್ಲ. ವಿಶೇಷತಃ ಮಾನವನನ್ನು
ತಿಯಾಗಿಯೋ, ಸಮಾಜವಾಗಿಯೋ ಒಂದು ದೇಶದ,
ಲದ, ನೀತಿಯ ಇಲ್ಲವೆ ನಡಾವಳಿಯ ಸನ್ನಿವೇಶದಲ್ಲಿ
ಟ್ಟು ದಿಟ್ಟಿಸುವಾಗ ಈ ದೃಷ್ಟಿ ಅವಶ್ಯಬೇಕು. ಇಂದು
ಯ ಕೂಸು. ದಿನದಿನವೂ ಬೆಳೆಯುತ್ತಿರುವ ಭೂತ
ಲವೆಂಬ ಬೇತಾಳದ ಬೆನ್ನೇರಿ ವರ್ತಮಾನದ ಕೂಸು
ತಿದೆ — ಕೌತುಕದ ಕಣ್ಣು ಬಿಟ್ಟು ಲೋಕವನ್ನು
ೀಡುತ್ತ. ವಿಕ್ಕ ಪ್ರಾಣಿಗಳು ಪರಿಸ್ಥಿತಿಯ ಪ್ರಕೃತಿಯ

ಕೂಸಾಗಿದ್ದರೆ ಮಾನವಪ್ರಾಣಿ ಇತಿಹಾಸದ ಕೂಸು. ನಮ್ಮ ಸಾವಿರ ಸಮಸ್ಯೆಗಳ ಮೂಲ ಇತಿಹಾಸದಲ್ಲಿ ಇದೆ. ಜಾತಿ, ಆಚಾರ, ರಾಜಕಾರಣ, ಸಮಾಜರಚನೆ, ಹಬ್ಬ, ಆರ್ಥಿಕ ವ್ಯವಸ್ಥೆ, ಕಾಯಿದೆ ಇವೆಲ್ಲವೂ ಇತಿಹಾಸದ ಫಲ. ಪ್ರತಿಯೊಂದು ಪ್ರಸಂಗಕ್ಕೂ ಪ್ರಮೇಯಕ್ಕೂ ಒಂದು ಹಿನ್ನಲೆ, ಆನುಪೂರ್ವಿ ಗತೇತಿಹಾಸ ಇದ್ದೇ ಇರುತ್ತದೆ. ಅದನ್ನು ಅರಿತುಕೊಂಡ ಹೊರತು ಆ ವಿಷಯ ಇತ್ಯರ್ಥವಾಗುವದು ಕಠಿಣ. ಐತಿಹಾಸಿಕ ದೃಷ್ಟಿ ಇಲ್ಲದಿದ್ದರೆ ನಮ್ಮ ವಿಚಾರಕ್ಕೆ ಲಂಗರು ಕಿತ್ತಿದಂತೆಯೇ. ಒಂದು ಪಾಪ – ಪುಣ್ಯದ ವಿಚಾರವೇ ನೋಡಿ. ಅದು ಒಂದು ಪಾಲು ಪ್ರಾದೇಶಿಕ. ಇನ್ನೊಂದು ಪಾಲು ಐತಿಹಾಸಿಕ. ಉಳಿದೆರಡು ಪಾಲು ಮನೋವೈಜ್ಞಾನಿಕ ಮತ್ತು ಕಾಲ್ಪನಿಕ. ದೃಷ್ಟಿಯ ಪ್ರಮಾಣಬದ್ಧತೆಗೂ, ಪ್ರಾಮಾಣಿಕತೆಗೂ ಐತಿಹಾಸಿಕ ಪರಿಜ್ಞಾನ ಅಥವಾ ಪರಿಶೀಲನೆ ಅತ್ಯಂತ ಅಗತ್ಯ. ಶ್ರೀಮಾನ್ ಬೇಂದ್ರೆಯವರು ಒಮ್ಮೆ ಅಂದಿದ್ದರು— ಭೂಗೋಲದ ಮರ್ಯಾದೆಗಳನ್ನು ಮೀರುವದೆ ಇತಿಹಾಸ, ಇತಿಹಾಸದ ಮರ್ಯಾದೆಗಳನ್ನು ಮೀರುವದೆ ಸಂಸ್ಕೃತಿ ಹೀಗೆ ಸಂಸ್ಕೃತಿಯ ಸಂವರ್ಧನೆಗೆ ಇತಿಹಾಸಗಳ ಇತಿ-ಮಿತಿಗಳ ತಿಳುವಳಿಕೆ ಅವಶ್ಯ.

ಮೂರನೆಯದು ತಾರತಮ್ಯ ದೃಷ್ಟಿ. ಯಾವದಕ್ಕೆ ಎಷ್ಟು ಮಹತ್ವ ಕೊಡಬೇಕೆಂಬ ದೃಷ್ಟಿ. ಬದುಕಿನಲ್ಲಿ ತಾತ್ಕಾಲಿಕ ತಾತ್ಪೂರ್ತಿಕ ಯಾವದು, ಶಾಶ್ವತ

ಶೂವದು – ಎಂಬ ವಿವೇಕ. ನಮ್ಮ ಭಾರತದಲ್ಲಿ ಸದ್ಯ ಾಜಕೀಯಕ್ಕೆ ಅವಾಸ್ತವವಾಗಿ, ಅವಶ್ಯಕತೆಗೂ ಮೀರಿ ಪ್ರಶಸ್ತ್ಯ ಪ್ರಾಧಾನ್ಯ ಬಂದಿದೆ. ಇದೂ ಒಂದು ಕೃತಿ — ವಿಪರೀತ ಕಾರ, ಹುಳಿ, ಉಪ್ಪು ಅಥವಾ ಹಿ ತಿನ್ನಬಯಸುವ ರುಚಿ ವಿಕಾರದಂತೆಯೇ. ವ್ಯಕ್ತಿ ರಲಿ, ಕುಲವಿರಲಿ, ಸಂಸ್ಥೆ ಇರಲಿ, ಸಮಾಜವಿರಲಿ — ವಕ್ಕೆ ಸಂಬಂಧಿಸುವ ಪ್ರಶ್ನೆಗಳನ್ನು ನಾಲ್ಕೂ ನಿಟ್ಟಿ ಂದ ನೋಡಿದ ಹೊರತು ಅವುಗಳ ಆಯ–ಕಟ್ಟು, ುತ್ತುಗುರಿ ಗೊತ್ತಾಗುವದಿಲ್ಲ. ಚಿಕ್ಕ ಮರಡಿಯು ಂಗ್ಗಲಿಗೆ ಮಲಗಿ ನೋಡಿದರೆ ಅದು ಮಹಾ ಪರ್ವ ವಾಗಿ ತೋರಬಹುದು. ಹಲವು ಸಮಸ್ಯೆಗಳನ್ನು ದುರಿಸುವಾಗ, ಅನೇಕ ಆವಶ್ಯಕತೆಗಳನ್ನು ಪೂರೈಸು ಾಗ, ಅನಿಷ್ಟ ಅನರ್ಥಗಳನ್ನೆ ಆಯ್ದುಕೊಳ್ಳುವ ಪೇಚು ದ್ದಾಗ ನಮಗೆ ಈ ದೃಷ್ಟಿ ಶುಭದೃಷ್ಟಿ. ದುಷ್ಯಂತನಿಗೆ ಂತಹದೇ ಒಂದು ಪೇಚು ಬಿತ್ತು. ಹೆಂಡತಿಯೆಂಬ ನ್ನು ಕೈಬಿಡಲೋ, ಹೆಂಡತಿಯಲ್ಲದವಳೆಂದಾಗೂ ಕೈ ಡಿಯಲೋ ಎಂದು. ಆಗ ಆತನ ನಿರ್ಣಯಕ್ಕೆ ವಿಲಂಬ ಾಗಲಿಲ್ಲ. ಹೆಚ್ಚಿನ ಒಳಿತನ್ನು ಆಯ್ದುಕೊಳ್ಳುವದಕ್ಕಿಂತ ಡಮೆಯ ಕೇಡನ್ನು — The lesser evil – ಆಯು ದು ಆಯುಮಾ೯ನಕ್ಕೂ ನಮಗೆ ತಪ್ಪಿದ್ದಲ್ಲ. ಅದಕ್ಕಾಗಿ ಾವು " ಗುರುಲಾಘವ " ಪರಿಕಿಸಬಲ್ಲವರಾಗಬೇಕು. ದೇ ಚದುರು. " ಚತುರ " ತನ ನಾಲ್ಕೂನಿಟ್ಟಿನ ನೋಟ.

“ ಎಗ್ಗ ”ತನ ಏಕೈಕ ದೃಷ್ಟಿಯ ಹಾದಿ, ಹಾದಿಯ ಹುಂಬತನ.

ನಾಲ್ಕನೆಯದು **ಪರಿಕ್ರಮ ದೃಷ್ಟಿ.** ಪರಿಕ್ರಮವೆಂಬ ಪದ ಇಂಗ್ಲಿಷಿನ Perspective ಎಂಬ ಅರ್ಥವನ್ನು ಕೊಡಲು ಬಳಸಿದ್ದಾಗಿದೆ. ಒಂದು ಸಂಗತಿಯನ್ನು ಅದರ ಹಿನ್ನೆಲೆ ಮುನ್ನೆಲೆ ಕೆಲಬಲಗಳ ಅಂತರ- ಅಂತಸ್ತುಗಳೊಂದಿಗೆ ತಿಳಿಯುವದು.

ಪ್ರಪಂಚದ ಸಂಗತಿಗಳೆಲ್ಲ ಒಂದಕ್ಕೊಂದು ಹೊಂದಿಕೊಂಡಿವೆ, ಸಾಪೇಕ್ಷವಾಗಿವೆ – ಎಂಬುದನ್ನು ಮನಗಾಣಿಸಲು ಐನ್‌ಸ್ಟಿನ್ ಮಹಾಶಯರೇ ಬೇಕಿಲ್ಲ. ವಸ್ತು-ವಸ್ತುಗಳ, ಪ್ರಶ್ನೆ-ಪ್ರಶ್ನೆಗಳ ಅನ್ಯೋನ್ಯ ಸಂಬಂಧಗಳನ್ನು ಸಮವಾಯ - ಸಮನ್ವಯಗಳನ್ನೂ ತಿಳಿದುಕೊಂಡರೇನೇ ಒಂದು ಸನ್ನಿವೇಶ ಸಾಕಲ್ಯವಾಗಿ ಅರ್ಥವಾಗುವದು. ಇದೇ ಪರಿಕ್ರಮ ದೃಷ್ಟಿ. ಒಂದು ನಿಲುಮೆಯ ಅನುಬಂಧ, ಅನುಪಾತ, ಸರಿಯಾಗಿ ತಿಳಿಯದೆ ಅದರ ಗೌರವ ಗುರುತಿಸಲಾಗುವದಿಲ್ಲ. ನಮ್ಮ ಮನೆ ಭಾರತದ ಭೂಪಟದಲ್ಲಿ ಕಾಣಬೇಕೆಂದು ಹಟ ಹಿಡಿಯಬಹುದೇ ? ಆದರೆ ನಮ್ಮ ವೈಯಕ್ತಿಕ ಅಥವಾ ಪ್ರಾದೇಶಿಕ ಸಂಗತಿಗಳಿಗೆ ಅಳತೆಗೆಟ್ಟ ಮಹತ್ವಕೊಟ್ಟು ನಾವು ಅವುಗಳನ್ನು ರಾಷ್ಟ್ರೀಯ ರಂಗದಲ್ಲಿ ಇಟ್ಟು ನೋಡುತ್ತೇವೆ — ಇಡಲು ನೋಡುತ್ತೇವೆ. ನಮ್ಮಲ್ಲಿ ಕಲಿತವರೆಂದುಕೊಳ್ಳುವ ಅನೇಕರಿಗೂ ಜೀವನವನ್ನು ನೋಡುವ ಒಂದು ಸಮ

ನ್ವಯ ದೃಷ್ಟಿ — **Integrated outlook** — ಬಂದಿರುವ ದಿಲ್ಲ. ಚಿಕ್ಕಪುಟ್ಟ ಸಂಗತಿಗಳಿಗೆ ಬ್ರಹ್ಮಾಂಡ ಮಹತ್ವ ಕೊಟ್ಟು ಅಂಥವರು ಕೂಗಾಡುವದು, ರೇಗಾಡುವದು, ಹೋರಾಡುವದು ಕಾಣುತ್ತೇವೆ. ಬಾಳಿನಲ್ಲಿ ಚಿಕ್ಕ ಸಂಗತಿಗಳಿಗೆಲ್ಲ ಚಿಕ್ಕದೇ ಬೆಲೆಯೆಂದಲ್ಲ. ಚಿಕ್ಕಪುಟ್ಟ ಸಂಗತಿಗಳ ಹನಿಹನಿ ಕೂಡಿಯೆ ಬಾಳಿನ ಹಳ್ಳ ಹರಿಯುತ್ತದೆ. ಆದರೂ ಹನಿಯೇ ಹಳ್ಳವೆಂದು ಯಾರೂ ಹಟ ಹಿಡಿಯುವದಿಲ್ಲ ! ಆದರೆ ಈ ವಿವೇಕ ತರಬೇತಿಯಿಂದ ನಮ್ಮ ವಿಚಾರಕ್ಕೆ ಪಳಗಬೇಕು. ಅಡವಿಯಿಂದ ಮರ ಬೇರೆಯೆಂದು ತಿಳಿಯುವಾಗಲೇ ಮರಗಳ ಲೆಕ್ಕದಲ್ಲಿ ದಿಕ್ಕು ತಪ್ಪಿ ಅಡವಿಯ ಕಲ್ಪನೆಯೇ ಆಗದಂತೆ ನಾವು ಅಡವಿಪಾಲು ಆಗಬಾರದು. ಕಿಸಾ ಗೌತಮಿಯ ಕತೆಯನ್ನು ಶ್ರೀ ಶಿವರಾಮ ಕಾರಂತರು ಕನ್ನಡದಲ್ಲಿ ಅಮರವಾಗಿಸಿದ್ದಾರೆ. ಆ ತಾಯಿಗೆ ತನ್ನ ಕಂದ ಸತ್ತ ದುಃಖವೇ ಎಲ್ಲಕ್ಕೂ ದೊಡ್ಡವಾಗಿತ್ತು. ಆಕೆಯ ಜಗತ್ತನ್ನೆ ಅದು ನುಂಗಿತು. ಅವಳಿಗೆ ಬುದ್ಧದೇವ ಕಾಣಿಸಿ ಕೊಟ್ಟದ್ದೇನು ? ಮನೆಮನೆಯಲ್ಲಿಯೂ ದುಃಖವಿದೆ. ಆಕೆಯ ದುಃಖಕ್ಕೂ ಮಿಗಿಲಾದ ಭಾರವಾದ ದುಃಖವಿದೆ. ದುಃಖ ಚಿಂತನೆಗಳಿಲ್ಲದ ಮನೆಯ ಸಾಸಿವೆ ಸಿಗಲಿಲ್ಲ. ಕಿಸಾಳ ಕೂಸು ಮತ್ತೆ ಬದುಕಲಿಲ್ಲ. ಆದರೇನಾಯಿತು ? ಆಕೆ ಬದುಕಿನ ಸಮನ್ವಯ ದೃಷ್ಟಿ ಪಡೆದಳು. ಬುದ್ಧನ ವಿಚಾರವಾದಿ ಭೂಮಿಕೆ ಆಕೆಗೆ ಅರ್ಥವಾಯಿತು. ತನ್ನ ದುಃಖವನ್ನು ವ್ಯಾಪಕ ಸನ್ನಿವೇಶದಲ್ಲಿ ಕಂಡುಕೊಳ್ಳುವ ಕಣ್ಣು ಆಕೆ ಪಡೆದಳು. ಇದೇ ಜ್ಞಾನದೃಷ್ಟಿ. ಮೂರು

ಕಲ್ಲುಗಳನ್ನು ನಾವು ಮೂರು ಕಡೆಗೆ ಹೇಗೋ ಒಗೆಯುತ್ತೇವೆ. ಆದರೆ ಆ ಹೇಗೋ ಒಗೆದಲ್ಲಿಯೂ ಒಂದು ನೇಮವಿರುತ್ತದೆ. ಹೇಗೆ ಒಗೆದರೂ ಅವು ಒಂದು ಪರಿಘದ ಮೇಲೆಯೇ ಬೀಳುತ್ತವೆ. ಆದರೆ ಆ ಪರಿಘದ ಕೇಂದ್ರಬಿಂದು ನಮಗೆ ಗೊತ್ತಾಗಬೇಕು. ಆ ಕೇಂದ್ರದಿಂದ ಕಲ್ಲುಗಳ ಪತನವೂ ಸಾರ್ಥಕವಾಗುತ್ತದೆ. ಈ ಕಲ್ಲಿನ ಕತೆಯೇ ಎಲ್ಲರ ಕತೆ. ವಿಚಾರವಾದ ಕಲಿಸುವದು ಈ ಕೇಂದ್ರವನ್ನು ಕಂಡುಹಿಡಿಯುವದು, ಅಲ್ಲಿಂದ ಎಲ್ಲವೂ ತಿಳಿ-ತಿಳುವಳಿಕೆ.

ಇನ್ನು ಐದನೆಯದು **ಆತ್ಮೋಪಮ್ಯದ ಮತ್ತು ಪರೋಪಮ್ಯದ ದೃಷ್ಟಿ.** " ಆತ್ಮೋಪಮ್ಯೇನ ಸರ್ವತಂ "– ಎಂದಿತು ಗೀತೆ. " ತನ್ನಂತೆ ಪರರ ಬಗೆದೊಡೆ — " ಎಂದನು ಸರ್ವಜ್ಞ. ತನ್ನನೆ ಅಳತೆಗೋಲಾಗಿಟ್ಟು ಇತರರನ್ನು ಅರಿತುಕೊಳ್ಳುವದು. ಈ ಕುರಿತು ಹೆಚ್ಚು ಹೇಳಬೇಕಾಗಿಲ್ಲ. ಇಲ್ಲಿ ನಾನು ಒತ್ತಿ ಹೇಳುವದು ಇನ್ನೊಂದು ದೃಷ್ಟಿ. ತನ್ನಂತೆ ಪರರೆಂದು ನೋಡುವದು ಒಂದು ರೀತಿ. ಇದು ಸಹಾನುಭೂತಿಯ ಆಹ್ವಾನ. ಆದರೆ ಒಬ್ಬರಂತೆ ಒಬ್ಬರು ಇರುವದಿಲ್ಲ. ಸಾಮಾನ್ಯವಾಗಿ ನೋಡಿದ ಮೇಲೂ ವಿಶೇಷವಾಗಿ, ಪ್ರತ್ಯೇಕವಾಗಿ ನೋಡಬೇಕಾಗುತ್ತದೆ. ಅನ್ವಯದಷ್ಟೇ ವ್ಯತಿರೇಕಕ್ಕೂ ಮಹತ್ವವಿದೆ. ತನ್ನಂತೆಯೇ ಪರರು ಇರುವದಿಲ್ಲ. ಒಬ್ಬರಂತೆಯೇ ಒಬ್ಬರು ಆಗುತ್ತ ಬಂದಿದ್ದರೆ ಜಗತ್ತಿನಲ್ಲಿ ಅಂಕಿತನಾಮಗಳ ಅದಲು - ಬದಲಿನ

ಹೊರತಾಗಿ ಬೇರೆ ಇತಿಹಾಸವೇ ಮೂರ್ಪಡುತ್ತಿದ್ದಿಲ್ಲ! ರಾಮನಂತೆ ಭರತನಿಲ್ಲ, ರಾವಣನಂತೆ ವಿಭೀಷಣನಿಲ್ಲ, ವಾಲಿಯಂತೆ ಸುಗ್ರೀವನಿಲ್ಲ! ನಾವು ನಿಜವಾಗಿಯೂ ಅರಿತುಕೊಳ್ಳಬೇಕಾದದ್ದು ಪರೋಪಮ್ಯ ದೃಷ್ಟಿ. **ಪರರ ಕಣ್ಣಿಗೆ** ನಾವು ಹೇಗೆ ಕಾಣುವೆವೋ ಹಾಗೆ ನಮ್ಮನ್ನು ನೋಡಿಕೊಳ್ಳುವದು. ಹಾಗೆ ನೋಡಿದಾಗ ನಮ್ಮ ನಿಜವಾದ ಅಕ್ಷಾಂಶ ರೇಖಾಂಶ ನಮಗೆ ಗೊತ್ತಾಗುವದು. ನಮ್ಮ ಮಟ್ಟಿಗೆ ನಾವು ದೊಡ್ಡವರು — "ಉತ್ತಮ ಪುರುಷರು". ಆದರೆ ನಾವು ಯಾವಾಗಲೂ ನಮ್ಮ ಗೆಳೆಯರು ಭಾವಿಸುವಷ್ಟು ಒಳ್ಳೆಯವರು ಇರುವದಿಲ್ಲ, ನಮ್ಮ ಹಗೆಗಳು ಕಲ್ಪಿಸುವಷ್ಟು ಕೆಟ್ಟವರೂ ಇರುವದಿಲ್ಲ. — ಮತ್ತೆ ನಾವೇ ತಿಳಿದಷ್ಟು ದೊಡ್ಡವರೂ ಇರುವದಿಲ್ಲ! ಈ ಕುರಿತು ಒಂದು ಸಮೀಕರಣವನ್ನೆ ಕೊಡುವದಾದರೆ :— ವ್ಯಕ್ತಿಯ ನಿಜವಾದ

ಬೆಲೆ = $\frac{\text{ಮಿತ್ರರ ಮತ}}{\text{ಶತ್ರುಗಳ ಮತ}}$ — ವ್ಯಕ್ತಿಯ ತನ್ನ ಕುರಿತಾದ ಮತ

ಹೀಗೆ ಇಡಬಹುದು. ಪ್ರಖ್ಯಾತ ಬರ್ನ್ಸ ಕವಿ ದೇವರಲ್ಲಿ ಬೇಡಿದ ಪ್ರಾರ್ಥನೆಯೇ ಇದು. "To see ourselves as others see us." ವಿಚಾರವಾದಿಯು ಈ ಸಮೀಕರಣವನ್ನು ಸಾಧಿಸಬೇಕು.

ಕೊನೆಯದಾಗಿ ಬೇಕಾದ ದೃಷ್ಟಿ – **ಔದಾರ್ಯ ದೃಷ್ಟಿ**, ಸಹಿಷ್ಣುತೆ. ಸಹಿಷ್ಣುತೆ ಇಲ್ಲದೆ ಸ್ವಾತಂತ್ರ್ಯ ಬರಿಯ ಮೋಸ. ಎಲ್ಲವನ್ನೂ ತಿಳಿಯುವದೆಂದರೆ ಎಲ್ಲವನ್ನೂ ಕ್ಷಮಿ

ಸುವದು. ಮತಭೇದ, ರುಚಿಭೇದ, ವೃತ್ತಿಭೇದ, ಪ್ರಕೃತಿ ಭೇದಗಳ ನಡುವೆ ನಾವು ಇಂದು ವೈಚಾರಿಕ "ಸಹಜೀವನ"ದ ತತ್ತ್ವವನ್ನು ಸ್ಥಾಪಿಸಬೇಕು. ಬದುಕಿಗೆ ನೂರು ಮುಖ, ನೂರು ಮಾರ್ಗ. ನನ್ನ ಮತವನ್ನು ಕಾಪಾಡಿಕೊಳ್ಳಲಿಕ್ಕೆ ನಾನು ಎಷ್ಟು ಸಿದ್ಧನೋ ಅಷ್ಟೇ ಪರರ ಮತವನ್ನು ಕಾಪಾಡಲಿಕ್ಕೂ ಸಿದ್ಧನಾಗಬೇಕು. ಅಂದರೇನೇ ಸಂಸ್ಕೃತಿ. ಒಂದೇ ರೂಪ, ಒಂದೇ ರಸ, ಒಂದೇ ರುಚಿ, ಒಂದೇ ರೀತಿ, ಒಂದೇ ರಂಗು — ಇದ್ದರೆ ಬದುಕಿಗೆ ಬೆಲೆಯುಂಟೆ, ವಿಶ್ವಕ್ಕೆ ಶೋಭೆಯುಂಟೆ? ವೈವಿಧ್ಯ ವೈಚಿತ್ರ್ಯಗಳ ವೈಭವದಲ್ಲಿಯೇ ನಾವು ಒಟ್ಟಾಗಿ — ಒಮ್ಮತವಾಗದಿದ್ದರೂ ಒಮ್ಮುಖವಾಗಿ ಸಾಗಬೇಕು. ಇದೇ ಕರ್ಮ ಮತ್ತು ಜ್ಞಾನಗಳ ಯೋಗ. "ನಿನ್ನ ಮತ ನನ್ನ ಮೇಲೆ ಹೇರಲು ಬಂದರೆ ನಾನು ಅದನ್ನು ಪ್ರತಿಭಟಿಸಲು ಪ್ರಾಣಕೊಡಲೂ ಸಿದ್ಧ, ಸರಿ. ಆದರೆ ಅದೇ ಸಮಯ ನಿನ್ನ ಮತಕ್ಕೆ ನಿನಗಿರುವ ಹಕ್ಕನ್ನು ರಕ್ಷಿಸಲು ನೀನು ಹೋಗುವಾಗ ನಿನಗೆ ನೆರವಾಗುವದಕ್ಕೆ ಪ್ರಾಣಕೊಡಲೂ ಅಷ್ಟೇ ಸಿದ್ಧ." — **ವಾಲ್ಟೇರ** ಹೇಳಿದ ಈ ನಿಲುವು ವಿಚಾರವಾದಿಯ ಔದಾರ್ಯ ದೃಷ್ಟಿಯ ಬಿರುದು. ಬಾಳಿನ ನಶ್ವರತೆ, ಮಾನವನ ಬುದ್ಧಿ-ಶಕ್ತಿಗಳ ಪರಿಮಿತತೆ, ಪ್ರಪಂಚದ ಪರಿವರ್ತನೀಯತೆ ಮತ್ತು ಸತ್ಯದ ಅನಂತತೆ-ಅಪಾರತೆ ಈ ನಾಲ್ಕು ಅಂಶಗಳನ್ನು ಮನಗಂಡರೆ ನಮಗೆ "ಇಲ್ಲಿ ಸಲ್ಲ" ಲಿಕ್ಕೆ ಔದಾರ್ಯದ ಸಹಿಷ್ಣುತೆಯ ದೃಷ್ಟಿಯೊಂದೇ

ೋಗ್ಯವಾಗಿದೆ, ಶಕ್ಯವಾಗಿದೆ ಮತ್ತು ಅಗತ್ಯವಾಗಿದೆ.

ವಿಚಾರವಾದದ ಸಂಕ್ಷಿಪ್ತ ಪರಿಚಯ ಇದುವರೆಗೆ ಾಡಿಕೊಡಲು ದುಡುಕಿದ್ದಾಯಿತು. ಕೊಡ ಕಡಲನ್ನು ಡಿಯಲಾರದು, ನಿಜ. ಆದರೆ ಕೊಡದ ನೀರು ಕಡ ದ ಬೇರೆಯಲ್ಲ, ನೋಡಿ. ಈ ವಿಷಯದ ಎಷ್ಟೋ ಗಗಳನ್ನು ನಾನು ಸೋಂಕಿಯೂ ಇಲ್ಲ. ವಿಚಾರವಾದದ ದೋಲನ, ಅದರ ಇತಿಹಾಸ, ಆದರ ವಿಶಿಷ್ಟ ಸಾಹಿತ್ಯ, ಕುರಿತು ಹೋರಾಡಿದ ಥಾಮಸ್ ಹಕ್ಸ್ಲಿಯಿಂದ ರ್ಟ್ರಾಂಡ ರಸೆಲರತನಕದ ಹಿಂದಿನ ಇಂದಿನ ಮಹಾರಥಿ ು, ವಿಚಾರವಾದಿಗಳ ಜಾಗತಿಕ ಹಾಗೂ ಭಾರತೀಯ ಘ ಸಂಸ್ಥೆಗಳು, ಭಾರತದಲ್ಲಿಯ ಆ ದಿಶೆಯ ಪ್ರಸಾರ- ಯತ್ನ ಹಾಗು ಪ್ರಚಲಿತ ಗ್ರಂಥ ಪ್ರಕಟನೆಗಳು ಇತ್ಯಾದಿ ್ಯಾದಿ ಅನೇಕ ವಿಷಯಗಳನ್ನು ನಾನು ಮುಟ್ಟಿಲ್ಲ. ಈ ಸನ್ಯಾಸದ ಮರ್ಯಾದೆ ಉಳಿಸಿಕೊಳ್ಳಲು ಅವನ್ನು ಟ್ಟುವಂತೆಯೂ ಇಲ್ಲ. ಅದೇ ರೀತಿ ಶುದ್ಧ ವಿಚಾರ ತಿಯ ಕುರಿತು, ವಿವಿಧ ತರ್ಕ ಶಾಸ್ತ್ರೀಯ ಮಾರ್ಗ ಕುರಿತು ಯಾವ ಶಬ್ದಾಡಂಬರವನ್ನೂ ನಾನು ಇಲ್ಲಿ ಸಿಲ್ಲ. ಅದಕ್ಕಾಗಿ ನಾನು ಕ್ಷಮೆಯನ್ನೂ ಬೇಡುವದಿಲ್ಲ.

ನಮ್ಮೆಲ್ಲರ – ವಿಶೇಷತಃ “ನಂಬಿ ಕೆಟ್ಟವ”ರಿಲ್ಲ ದು ನಂಬಿ ಕೆಡುತ್ತಿದ್ದ ನಮ್ಮ ಕನ್ನಡಿಗರ – ಪರವಾಗಿ

ನನ್ನ ಪ್ರಾರ್ಥನೆ : ಶತಮಾನಗಳಾಚೆಯಿಂದ ನವ
ಋಷಿಗಳು ನುಡಿದು ಬಂದದ್ದು, ತಲೆಮಾರಿನಿಂದ ತ
ಮಾರಿಗೆ ಜನ್ಮದಿಂದ ಹುಟ್ಟಿದ ಶೂದ್ರನಿಗೆ ಸಂಸ್ಕಾ
ಕೊಟ್ಟು ದ್ವಿಜನನ್ನಾಗಿ ಮಾಡಲು ಜಪಿಸಿ ತಂದದ್ದು –
" ಧಿಯೋ ನಃ ಪ್ರಚೋದಯಾತ್ "

---

ನೆರವಾದ ಪುಸ್ತಕಗಳಲ್ಲಿ ಕೆಲವು :

1 Sceptical Essays — *Bertrand Russel*

2 Why I am not a Cristian — *Bertrand Russel*

3 Reason Romanticism and Revolution — *M. N. Roy*

4 Civilization — *Clive Bell*

5 ' Sane Society ' — *Erric Fromme*

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ
ಡಾ. ಕೆ. ಕೃಷ್ಣಮೂರ್ತಿ, ಎಮ್.ಎ.,ಬಿ.ಟಿ.,ಪಿಎಚ್.ಡಿ.

೨. ಮನೋರೋಗಗಳು
ಪ್ರೊ. ಎನ್. ಆರ್. ಕುಲಕರ್ಣಿ, ಎಮ್.ಎ.,ಎಲ್‌ಎಲ್.ಬಿ

೩. ಪ್ರಥಮ ಪಂಚವಾರ್ಷಿಕ ಯೋಜನೆ ಹಾಗೂ ಒಕ್ಕಲತನ
ಡಾ. ಎನ್. ಪಿ. ಪಾಟೀಲ, ಬಿ.ಎಸ್‌ಸಿ. (ಅಗ್ರಿ), ಪಿಎಚ್.ಡಿ.

೪. ಗಾದೆಗಳು
ಪ್ರೊ. ಎ. ಕೆ. ರಾಮಾನುಜನ್, ಎಂ. ಎ.

೫. ಭಾರತದಲ್ಲಿ ಜಾತಿಪದ್ಧತಿ
ಡಾ. ವಿಕ್ಟರ ಎಸ್. ಡಿಸೋಜಾ, ಎಂ. ಎ., ಪಿಎಚ್. ಡಿ.

೬. ಕೀಟಕ ಪಿಡುಗುಗಳ ಸಮೀಕ್ಷಣೆ
ಪ್ರೊ. ಎಸ್. ಎಸ್. ಕಟಗಿಹಳ್ಳಿಮಠ, ಎಂ. ಎಸ್‌ಸಿ.,

೭. ರಾಜಕೀಯ ಪಕ್ಷಗಳು
ಪ್ರೊ. ಎನ್. ರಾಜಗೋಪಾಲರಾವ್, ಎಂ. ಎ

೮. ಸ್ವಾದಿ ಅರಸುಮನೆತನ
ಪ್ರೊ. ಸ. ಸ. ಮಾಳವಾಡ, ಎಂ. ಎ.

೯. ಮಕ್ಕಳ ಶಿಕ್ಷಣ
ಡಾ. ಡಿ. ಎಸ್. ಕರ್ಕಿ, ಎಂ. ಎ., ಪಿಎಚ್. ಡಿ.

೧೦. ಮೂಢ ನಂಬಿಕೆಗಳು
ಪ್ರೊ. ಎಲ್. ಆರ್. ಹೆಗಡೆ, ಎಂ. ಎ.

೧೧. ಸಂಸ್ಕೃತ ಕವಯಿತ್ರಿಯರು
ಪ್ರೊ. ಕೆ. ಟಿ. ಪಾಂಡುರಂಗಿ, ಎಂ. ಎ.

೧೨. ನಿತ್ಯ ಜೀವನದಲ್ಲಿ ರಸಾಯನಶಾಸ್ತ್ರ
ಪ್ರೊ. ಬಿ. ವಿರೂಪಾಕ್ಷಪ್ಪ, ಎಂ. ಎಸ್‌ಸಿ.

೧೩. ಸಾರ್ವಜನಿಕ ಆಡಳಿತ
ಪ್ರೊ. ಜಿ. ಎಸ್. ಹಾಲಪ್ಪ, ಎಂ. ಎ., (ಕೊಲಂಬಿಯಾ)

ಬೆಲೆ : ಪ್ರತಿ ಒಂದಕ್ಕೆ ೨೫ ನಯೆಪೈಸೆ

## ಇತರ ಪ್ರಕಟನೆಗಳು

1 The Hindu Code Bill Rs. 2
*—Justice Gajendragadkar*

2 Introduction to Karnatak Mysticism Re. 1
*—Dr. R. D. Ranade*

3 Pleistocene Studies in the Malaprabha Basin Rs. 15
*—Dr. R. V. Joshi*

4 Karnataka's Trans-Oceanic Contacts Rs. 2
*—Dr. B. A. Saletore*

ಕರ್ನಾಟಕ ವಿಶ್ವವಿದ್ಯಾಲಯ
ಧಾ ರ ವಾ ಡ




ವಿಶ್ವವಿದ್ಯಾಲಯದ ಪ್ರಕಟನೆಗಳ ಮಾರಾಟಗಾರರು :

ಭಾರತ ಬುಕ್ ಡಿಪೊ
ಗಾಂಧಿ ಚೌಕ, ಧಾರವಾಡ